# ಗ್ರಹಶೀಲಗಳು

ಭಾನುಪ್ರಿಯ

ಶ್ರೀ ಕೃಷ್ಣ ಆಸ್ಟ್ರೋ ಬ್ಯೂರೋ,
592, ಸಜ್ಜನರಾವ್ ರೋಡ್, ವಿಶ್ವೇಶ್ವರಪುರ, ಬೆಂಗಳೂರು – 4

## ಜ್ಯೋತಿಷ್ಯ ಶಾಸ್ತ್ರ ಪರಿಚಯ

# ಗ್ರಹಶೀಲಗಳು

—ಭಾನುಪ್ರಿಯ

ಶ್ರೀ ಕೃಷ್ಣ ಆಸ್ಟ್ರೋ ಬ್ಯೂರೋ,
592 ಸಜ್ಜನರಾವ್ ರೋಡ್, ವಿಶ್ವೇಶ್ವರಪುರ, ಬೆಂಗಳೂರು - 4

ಪ್ರಕಾಶಕರು:
**ಶ್ರೀ ಕೃಷ್ಣ ಆಸ್ಫೋ ಬ್ಯೂರೋ,**
592, ಸಜ್ಜನರಾವ್ ರೋಡ್,
ವಿಶ್ವೇಶ್ವರಪುರ, ಬೆಂಗಳೂರು - 560 004.

ಪ್ರಥಮ ಮುದ್ರಣ 1967
ದ್ವಿತೀಯ ಮುದ್ರಣ 1993

ಬೆಲೆ : 30–00

ಮುದ್ರಕರು:
**ಬೃಂದಾವನ್ ಪ್ರಿಂಟರ್ಸ್ ಆಂಡ್ ಪಬ್ಲಿಷರ್ಸ್ (ಪ್ರೈ) ಲಿಮಿಟೆಡ್**
ಬೆಂಗಳೂರು - 560 018.

# ಮುನ್ನುಡಿ

ಗೆಳೆಯ ನಾಗರಾಜ ಮಿತಭಾಷಿ. ಅವರ ಲೆಕ್ಕಣಿಯ ಮಿತ ಪದಗಳ ಶೈಲಿ. ಹತ್ತು ಮಾತುಗಲ್ಲಿ ಹೇಳುವುದನ್ನು ಮೂರು ಮಾತುಗಳಲ್ಲಿ ತಿಳಿಯಕೊಡಬಹುದಾದರೆ ಏಕಾಗಬಾರದು? ಎಂಬ ವಿಚಾರವನ್ನು ಪ್ರಯೋಗದಲ್ಲಿಟ್ಟು ಕೆಲವು ಲೇಖನಗಳನ್ನು ಅವರು ಬರೆದಾಗ ಅವರ 'ಮೊಟಕು ತಂತ್ರ'ದ ಶೈಲಿಯನ್ನು ಮೆಚ್ಚಿದವರುಂಟು ಮೆಚ್ಚದೆ ಲಘುಗೇಲಿ ಮಾಡಿದವರುಂಟು ಅನಂತರ ಬರಬರುತ್ತ ಅವರೇ ಅದನ್ನು ಮೇಚ್ಚಿಕೊಂಡ ವಾರವಾರವೂ ಓದುತ್ತ ಬಂದುದುಂಟು. ಜ್ಯೋತಿಷ್ಯ ಶಾಸ್ತ್ರ ವಿಶ್ಲೇಷಣೆಯಂಥ ಕ್ಲಿಷ್ಟ ವಿಷಯವನ್ನು ಸಂಕ್ಷಿಪ್ತ ವಾಕ್ಯಗಳ ಸರಳ ಶೈಲಿಯಲ್ಲಿ "ಪದವಿಟ್ಟಳಿಸದ" ಅಗ್ಗಳಿಕೆಯಿಂದ ಬರೆಯುತ್ತಿರುವ ಶ್ರೀ ನಾಗರಾಜ ಅವರದು ಒಂದು ರೀತಿಯಲ್ಲಿ ವಿಶಿಷ್ಟ ಸಾಧನೆ ಶ್ರೀಸಾಮಾನ್ಯನ ಮಿದುಳು- ಮನಸ್ಸಿಗೆ ಮುಟ್ಟಿ ಮೆಚ್ಚಿಸುವ ರೀತಿಯ ಈ ಲೇಖನಗಳು ಹೆಚ್ಚು ಹೆಚ್ಚು ಜನಪ್ರಿಯವಾಗುತ್ತ ಬಂದಂತೆ, ಸಾಮಾನ್ಯರ ತಲೆಗೆ ಸಿಕ್ಕದ ವಸ್ತುವೆಂಬ ಜ್ಯೋತಿಷ್ಯ ಶಾಸ್ತ್ರದ ಪರಿಚಯ ಇಷ್ಟು ಸರಳ ಸುಲಭ ಸಾಧ್ಯವೆಂಬ ಮೆಚ್ಚುಗೆಯ ಅರಿವು ಹೆಚ್ಚಿದಂತೆ "ನಿಮ್ಮ ಲೇಖನಗಳನ್ನು ಪುಸ್ತಕ ರೂಪದಲ್ಲಿ ತನ್ನಿ" ಎಂಬ ಸಲಹೆ ಅನೇಕ ಮಿತ್ರರಿಂದ ಬಂದುದು ಸಹಜ. ಅಂಥ ಸಲಹೆ ಮಾಡಿದವರಲ್ಲಿ ನಾನೂ ಒಬ್ಬ. ಬರೆಯುವ ಗೀಳಿರುವ ಯಾರು ಏನು ಬರೆದರೂ ಸಂತೋಷಗೊಂಡು ಬೆನ್ನು ತಟ್ಟುವ ಜಾತಿಗೆ ಸೇರಿದವನು ನಾನು. ಇನ್ನು ಜ್ಯೋತಿಷ್ಯದಂಥ ಅಭ್ಯಾಸ ಕಠಿಣವಾದ ಶಾಸ್ತ್ರೀಯ ವಿಚಾರ ಕುರಿತು ಸರಳ ಶೈಲಿಯ ನಿರೂಪಣೆಯ ಯೋಚನೆ ಮೂಡಿಬಂದಾಗ ಹೆಚ್ಚಿನ ಮೆಚ್ಚುಗೆಯ ಮಾತುಗಳನ್ನಾಡಿ ಉತ್ತೇಜನ ನೀಡುವುದು ನನ್ನ ಕರ್ತವ್ಯವೆನ್ನುತ್ತೇನೆ. ಆ ಮೆಚ್ಚುಗೆಯ ಪ್ರತಿರೂಪ ಈ ಮೂರು ನುಡಿಯ ಮುನ್ನುಡಿ.

ಸಾಹಿತ್ಯದಲ್ಲಿ ಒಂದು ಹೊಸ ಪ್ರಯೋಗವಾದ ಜ್ಯೋತಿಷ್ಯಶಾಸ್ತ್ರ ವಿಶ್ಲೇಷಣ ಕಲೆಯಲ್ಲಿ ಸಿದ್ಧಹಸ್ತರಾಗುತ್ತಿರುವ ಗೆಳೆಯ ನಾಗರಾಜ ಅವರ ಮೊದಲ ಸಂಕಲನ "ಗ್ರಹಶೀಲಗಳು" ಇನ್ನು ಹಲವು ಹದಿನೆಂಟು ವೈಶಿಷ್ಟ್ಯ-ವೈವಿಧ್ಯಪೂರ್ಣ ಕೃತಿಗಳಿಗೆ ನಾಂದಿಯಾದೀತೆಂದು ನನ್ನ ನೆನಕೆ, ಬಯಕೆ.

ತಾರೀಖು ೬-೯-೧೯೬೭

ರಾಮಚಂದ್ರರಾವ್
ಸಂಪಾದ: ಪ್ರಜಾವಾಣಿ

# ನಮ್ಮ ನಿಮ್ಮ ಮಾತು

ಈಗೀಗ ಜ್ಯೋತಿಷ್ಯ ಎಲ್ಲರಿಗೂ ಪ್ರಿಯ. ತಿಳಿಯಬೇಕು ಎನ್ನುವ ಕುತೂಹಲ. ಕೆಲವರಿಗೆ ಹವ್ಯಾಸ, ಹವರಿಗೆ ಅಭ್ಯಾಸ. ಹಿಂದಿನವರು ಸೂತ್ರಗಳಲ್ಲಿ, ಶ್ಲೋಕಗಳಲ್ಲಿ ಬರೆದರು. ಅದೂ ಸಂಸ್ಕೃತ ಬೇರೆ. ಸಂಸ್ಕೃತ ಕಠಿಣ ಭಾಷೆ. ಈ ನ್ಯೂನತೇ, ಕಲಿಯುವ ಹುರಿಯಾಳುಗಳಿಗೆ ದೊಡ್ಡ ಅಡ್ಡಿ. ವಿದೇಶಿಯರಿಗೂ ಇದೇ ಶಾಸ್ತ್ರ, ನಮಗೂ ಇದೇ ನಮಗೂ ಇದೇ ಶಾಸ್ತ್ರ, ಅವರದು ನಮಗೆ ಹೆಚ್ಚಿಗೆ ಪ್ರಿಯ. ಕಾಣ ಅವರದು ವಿದೇಶೀಯ ಅಧ್ಯಯನ. ಇಂಗ್ಲೀಷು ಭಾಷೆ, ಒಂದು ನಮೂನೆ ನಾಗರಿಕದ ಕುರುಹು. ಅದಕ್ಕೆ ಗೌರವ ಹೆಚ್ಚು. ಎಷ್ಟು ಸರಿ, ಎಷ್ಟು ತಪ್ಪು? ತಿಳಿಯದು. ಆದರೇ ವಿಶ್ವದಲ್ಲಿ ಹೆಚ್ಚಾಗಿ ಬಳಸುವ ಭಾಷೆ ಅದು. ನಮಗೆ ಆ ಭಾಷೆಯಲ್ಲಿ ಅರ್ಥದ ಅರಿವೂ ಸುಲಭ, ಅಧ್ಯಯನವೂ ಸುಲಭ.

ಸೂತ್ರ–ಅರ್ಥ ಇವುಗಳ ಗೊಂದಲ ಯಾರಿಗೆ ಬೇಕು? ಈ ಕಾರಣ ಸುಲಭ ಸರಳ ಶೈಲಿ ಅಗತ್ಯ. ಆ ಶೈಲಿ, ಆ ಭಾಷೆ ಈ ಶಾಸ್ತ್ರ ಅಧ್ಯಯನದ ಸುಲಭ ಸಾಧನೆಗಳೇ ಸರಿ. ತೇಗೋ: ಅಂತೂ "ಜ್ಯೋತಿಷ್ಯ" ಎಲ್ಲ ಶಾಸ್ತ್ರಗಳಂತೆ ಒಂದು ಶಾಸ್ತ್ರ . ಎಲ್ಲಾ ಶಾಸ್ತ್ರಗಳ ಮೂಲದ ಛಾಯೆ ಇದರಲ್ಲಿಯೂ ಇದೆ, ಈ ಅರಿವು ಈಗ ಜನಗಳಿಗೆ ಬಂದಿದೆ. ಅದಕ್ಕೆ ಕಾರಣ, ಸುಲಭ ಶೈಲಿಯ ಸರಳ ಭಾಷೆಯ ವಿದೇಶೀ ಪುಸ್ತಕಗಳು.

ಇದು ಪ್ರಗತಿಯತ್ತ ಇಟ್ಟ ಒಂದು ಹೆಜ್ಜೆ. "ಪ್ರಜಾವಾಣಿ" ಯವರು ಪ್ರಯೋಗಾತ್ಮಕವಾದ ಈ ಹೆಜ್ಜೆಯನ್ನು ಇಟ್ಟರು. ಜನತಾ ಸೇವೆಗೆ ಬಂದಿತು ಅವರ ಕಾಣಿಕೆ ಈ " ಜ್ಯೋತಿಷ್ಯ ಶಾಸ್ತ್ರ ಪರಿಚಯ". ವಿದೇಶೀಯರ ಶೈಲಿ, ಸರಳ ದೈನಂದಿನ ಭಾಷೆ ಇಲ್ಲಿಯೂ ಅಗತ್ಯ ಈ ಕಾರಣ ಆ ಶೈಲಿಯ ಅನುಕರಣೆ. ಆದರೆ ಇದರಿಂದ ಪ್ರಯೋಜನ ಆಗಿದೆ ಭಯವಿಲ್ಲದೆ ಯಾರಾದರೂ ಸರಿ, ಇದನ್ನು ಓದಬಹುದು. ಇದರಿಂದ ಸಾಕಷ್ಟು ವಿಷಯ ತಿಳಿದೀತು. ಈ ಸಾಧನೆ ಪ್ರಜಾವಾಣಿಯ " ಸಾಪ್ತಾಹಿಕ ಪುರವಣಿ"ಯ ಲೇಖನಗಳಿಂದ.

ಮೊತ್ತ ಮೊದಲಿನ ಕಂತು, ಈ ಸಣ್ಣ ಪುಸ್ತಕ. ಇದರಲ್ಲಿ ಗ್ರಹಗಳ ಕಾರಕತ್ವಗಳ ಸ್ಥೂಲ ಪರಿಶೀಲನೆ ಇದೆ. ಎಲ್ಲರಿಗೂ ಇದು ತಿಳಿದ ವಿಷಯವೇ ಸರಿ. ಆದರೆ ಇನ್ನೂ ಹೆಚ್ಚು ಓದುಗರು ಓದಲಿ, ಓದಿ ತಿಳಿಯಲೆನ್ನುವ ಹಿರಿಯ ಆಕಾಂಕ್ಷೆ ಇದರ ಗುರಿ. ಪ್ರಜಾವಾಣಿ ಸಾಪ್ತಾಹಿಕ ಪುರವಣಿ ಓದುಗರಿದೆ ಇದು ಹೊಸದಲ್ಲ. ಆದರೆ ಆ ಓದುಗರಿಗೂ ಒಂದು ಹಂಬಲ ! ಪುಸ್ತಕ ರೂಪ ಈ ಲೇಖನಗಳಿಗೆ ಕ್ಷೇಮ ಎಂದು

ಅನೇಕರ ಆಸೆ. ಇಂತಹ ಪತ್ರಗಳು ಈ ಪ್ರಯತ್ನಕ್ಕೆ ಮೂಲ ಉತ್ತೇಜನ. ಆದ್ದರಿಂದ ಈ ಸಣ್ಣ ಯತ್ನ.

ನಕ್ಷತ್ರಗಳು, ಗ್ರಹಗಳು, ತಿಥಿ, ವಾರಗಳು ಈ ವಿಷಯ ಹಿಂದೆಯೇ ಎಷ್ಟೋ ಕಡೆ ಪ್ರಸಿದ್ಧ ಪ್ರಕಟನೆಗಳಲ್ಲಿವೆ. ಕ್ರಮಕ್ಕಾಗಿ ಅದರ ಅನುಸರಣೆ. ಆದರೆ ನಕ್ಷತ್ರ ನಿಲ್ದಾಣ, ಅದರ ಉತ್ಪತ್ತಿ ಒಂದು ಹೊಸ ಯತ್ನ. ಇದಕ್ಕೆ ಮೂಲ ಆಸರೆ "ನಾಡೀ ಶಿವ ಮಹಾ ವಾಕ್ಯ" ಗ್ರಂಥ. ಮಾನ್ಯ ಶ್ರೀ ವೇ. ಮೂ. ಜ್ಯೋತಿಷಾಚಾರ್ಯ ಗುಂಜೂರು ನಾರಾಯಣ ಶಾಸ್ತ್ರಗಳಲ್ಲಿದೆ ಈ ಗ್ರಂಥ. ಬಾಲ್ಯ ಚಾಪಲ್ಯದ ಪೂರೈಕೆಗಾಗಿ ಶ್ರೀ ಶಾಸ್ತ್ರಿಗಳು ಈ ಗ್ರಂಥ ಪರಿಚಯ ಮಾಡಿಸಿದ್ದಾರೆ. ಗಣಪತಿ ಚಕ್ರದ ಹಲವಾರು ಪುಟಗಳನ್ನು ಹೇಳಿ ಬರೆಯಿಸಿದ್ದಾರೆ. ಈ ವಿದ್ಯಾರ್ಥಿಯ ಮೇಲೆ ಅವರಿಗಿದ್ದ ಹೃತ್ಪೂರ್ವಕ ಪ್ರೀತಿವಾತ್ಸಲ್ಯದ ಕುರುಹೇ ಇದು. ಸಹಸ್ರಾರು ಜಾತಕಗಳನ್ನು ಓದುವಾಗ ಅದನ್ನು ನನಗೆ ಕೇಳಲು ಉತ್ತೇಜನ ಕೊಟ್ಟಿದ್ದಾರೆ, ಅವರಿಗೆ ನನ್ನ ಅನಂತಾನಂತ ವಂದನೆಗಳು.

ನಕ್ಷತ್ರ ನಿಲ್ದಾಣಗಳು, ಸಂಖ್ಯಾ ಶಾಸ್ತ್ರ – ಈ ಎರಡೂ ಬೆಳಕು ಕಂಡಿದ್ದು ಜ್ಯೋತಿಷ್ಯ ಸಮ್ಮೇಲನದಲ್ಲಿ. ೧೯೭೬ ರಲ್ಲಿ ಬೆಂಗಳೂರಿನಲ್ಲಿ ಅಖಿಲ ಕರ್ನಾಟಕ ಜ್ಯೋತಿಷ್ಯ ಸಮ್ಮೇಲನ ಶ್ರೀಮಾನ್ ಗಲಗಲಿಯವರ ಅಧ್ಯಕ್ಷತೆಯಲ್ಲಿ ನಡೆಯಿತು. ಅಲ್ಲಿ ನೆರೆದ ವಿದ್ವನ್ಮಣಿಗಳ ಮುಂದೆ ಓದಿದ್ದು ಅಲ್ಲದೆ, ಆಗಿನ ಸ್ಮಾರಕ ಸಂಚಿಕೆಯಲ್ಲಿ ಪ್ರಕಟವಾಗಿವೆ. ಎಲ್ಲಾ ಪಂಡಿತರೂ ಸಹೃದಯ ಔದಾರ್ಯದಿಂದ ಇದನ್ನು ಆಶೀರ್ವದಿಸಿದ್ದಾರೆ, ಪ್ರೊ|| ಬಿ. ವಿ. ರಾಮನ್‌ರಂತೂ ಆಗ ನೀಡಿದ ಉತ್ತೇಜನ ಅಷ್ಟು ಇಷ್ಟು ಅಲ್ಲ. ಸಂಖ್ಯಾ ಶಾಸ್ತ್ರವಿರಡೂ ಪ್ರಶ್ನಶಾಸ್ತ್ರ ಮುಂದೆ ಒಂದೇ ಕಂತಿನಲ್ಲಿ ವಿವರವಾಗಿ ತರಲು ಸನ್ನಾಹ ನಡೆದಿದೆ. ಈ ಕಾರಣ ಸ್ಥೂಲ ರೀತಿಯ ನಿರೂಪಣೆ ಇಲ್ಲಿ.

ಇನ್ನೂ ಮುಂದಿನ ಕಂತುಗಳಿವೆ. ಜಾತಕ ಗಣಿತ, ಗ್ರಹಗಳ ಸ್ಥಾಪನೆ, ಪಂಚಾಂಗದಿಂದ ಜಾತಕ ನಿರ್ಮಾಣ ಇತ್ಯಾದಿ ಗಣಿತ ಭಾಗವಿದೆ. ಭಾವಫಲ ವಿವರಣೆ, ರಾಜಯೋಗಗಳು ಉಪದೆಶಾ ಫಲ, ಪ್ರಶ್ನ ಶಾಸ್ತ್ರ ಇತ್ಯಾದಿ .ಎಲ್ಲವೂ ನಿಮ್ಮ ಕೈ ಸೇರಬೇಕು. ಅದಕ್ಕೆ ನಮ್ಮ ಈ ಯತ್ನಕ್ಕೆ ನಿಮ್ಮ ಪ್ರೀತಿಯ ಉತ್ತೇಜನ ಅತಿ ಅವಶ್ಯ. ಯೋಗ್ಯತೆ ಇದೆಯೇ? ಈ ಪ್ರಶ್ನೆಗೆ ನಿರ್ಣಯ ನಿಮ್ಮದು. ಧಾರಾಕರವಾಗಿ ಈ ಲೇಖನಗಳನ್ನು ಪ್ರಜಾವಾಣಿ ನಿಮ್ಮ ಮುಂದೆ ಮೊದಲೇ ಇಡುವ ಔದಾರ್ಯ ತೋರಿಸಿದೆ. ಆದರೆ ನಿಮ್ಮ ನಿರ್ಣಯ, ಉತ್ತೇಜನ ಎಲ್ಲವೂ ಈ ಯತ್ನಕ್ಕೆ ಜಯವಾಗಲು ನೆರವು.

"ಭಾನುಪ್ರಿಯ" ಪ್ರಜಾವಾಣಿ ನಾಮಕರಣ ಮಾಡಿದ ಕೂಸು . ಇದರ ಪಾಲನೆ ಪೋಷಣೆಗಳ ಹೊಣೆಯೂ ಅದರದೇ.

ಕನ್ನಡ ವೃತ್ತಪತ್ರಿಕೆಯ ಚರಿತ್ರೆಯಲ್ಲಿ "ಪ್ರಜಾವಾಣಿ" ಪ್ರಾಯೋಗಿಕ ಹೆಜ್ಜೆಗೆ ಒಂದು ಹೆಸರು . ನಾಲ್ಕು ವರುಷಗಳ ಹಿಂದೆ ಸರಳ ಲೇಖನಗಳ ಮಾಲೆಯನ್ನು ಶುರುಮಾಡಿದರು. ಇದರ ಫಲ "ಭಾನುಪ್ರಿಯ " ಜನನ. ಜನತೆಗೆ "ಪ್ರಜಾವಾಣಿ" ನೀಡಿದ ಕಾಣಿಕೆ " ಜ್ಯೋತಿಷ್ಯ ಶಾಸ್ತ್ರ ಪರಿಚಯ".

"ಪ್ರಜಾವಾಣಿ"ಯ ಓದುಗರಂತೂ ಮೇಲಿಂದ ಮೇಲೆ ಉತ್ತೇಜನ ಕೊಟ್ಟು ಆದರಿಂದ ಈ ಯತ್ನ ಮುಂದುವರೆಯುತ್ತಿದೆ. ಈ ಯತ್ನಕ್ಕೆ ಪ್ರಜಾವಾಣಿ ಮಾಲೀಕರ ಪೋಷಣೆ, ಪ್ರಧಾನ ಸಂಪಾದಕರಾದ ಶ್ರೀ ಟಿ.ಎಸ್.ಆರ್. (ರಾಮಚಂದ್ರ ರಾಯರು) ಕೊಡುತ್ತಿರುವ ವಾತ್ಸಲ್ಯಪೂರ್ವಕ ಉತ್ತೇಜನ ಹೇಳತೀರದು. ಇದೇ ರೀತಿ "ಸಾಪ್ತಾಹಿಕ ಪುರವಣಿ"ಯ ಉಪಸಂಪಾದಕರುಗಳಾದ ಮಿತ್ರ ಶ್ರೀ ಬಿ.ಎಂ. ಸಿಂಗ್, ಶ್ರೀ ಎಸ್.ಆರ್.ಕೆ. ಮತ್ತು ಬಿ.ಯಂ. ಕೃಷ್ಣಸ್ವಾಮಿ ಇವರುಗಳ ಸಹಕಾರ ಮತ್ತು ಒಲವುಗಳು ಹೆಚ್ಚು ಹೆಚ್ಚು ಬರೆಯಲು ಒಂದು ಸ್ಫೂರ್ತಿ. ಅಲ್ಲಲ್ಲಿ ಆಗಾಗ ಭಾಷಾಗೊಂದಲ ಬಗೆಹರಿಸಲು ಸೂಕ್ತ ಸಲಹೆ ನೀಡುತ್ತಿರುವ ಶ್ರೀ ವೈ. ಎನ್. ಕೆ.ಯವರಿಗೆ, ಎಲ್ಲದಕ್ಕಿಂತ ಮಿಗಿಲಾಗಿ ಈ ಲೇಖನಮಾಲೆಯನ್ನು ಬರೆಯಲು ಸಲಹೆ ಮೊತ್ತಮೊದಲು ನೀಡಿ ಜನತೆಗೆ ಸೇವೆ ಸಲ್ಲಿಸಿದ ಶ್ರೀ ಆರ್. ಶಾಮಣ್ಣನವರಿಗೆ ಕೃತಜ್ಞತೆಗಳು.

ಕೊನೆಯದಾಗಿ ಆಗಿಂದಾಗಿಗೆ ಓದುಗರು ತಮ್ಮ ಮೆಚ್ಚುಗೆಯನ್ನು ತೋರಿಸಿ ಸಂಪಾದಕರಿಗೆ ಬರೆದ ಪತ್ರಗಳು ಉತ್ಸಾಹವನ್ನು ಇಮ್ಮಡಿಸುವುದಕ್ಕಾಗಿ ನನ್ನ ಅನಂತಾನಂತ ವಂದನೆಗಳು.

ಈ ಪುಸ್ತಕವನ್ನು ಇಷ್ಟು ಅಂದವಾಗಿ ಮುದ್ರಿಸಿ ನಿಮ್ಮ ಕೈಗೆ ಬರುವಂತೆ ಮಾಡಿದ ನನ್ನ ಹಿತೈಷಿ ಬೃಂದಾವನ್ ಪ್ರಿಂಟರ್ಸ್ ಸಂಸ್ಥೆಯ ಶ್ರೀ ಎಮ್. ಎಚ್. ಕೌಜಲಗಿಯವರಿಗೆ ನನ್ನ ವಂದನೆಗಳು.

ವಿಜಯದಶಮಿ
ಪ್ಲವಂಗ ಸಂವತ್ಸರ
ಬೆಂಗಳೂರು-೪

ಲೇಖಕ
ಭಾನುಪ್ರಿಯ

# ಸ ಮ ರ್ಪ ಣೆ

ಜಗದ್ಗುರು
ಶ್ರೀ ರಾಘವೇಂದ್ರಸ್ವಾಮಿಗಳವರು



ಪೂಜ್ಯಾಯ ರಾಘವೇಂದ್ರಾಯ ಸತ್ಯಧರ್ಮ ರತಾಯಚ।
ಭಜತಾಂ ಕಲ್ಪವೃಕ್ಷಾಯ ನಮತಾಂ ಕಾಮಧೇನವೇ

# ಪರಿವಿಡಿ


| | | |
|---|---|---|
| | | ಪುಟ |
| 1 | ಜನಸಾಮಾನ್ಯಕ್ಕೆ ಜೋಯಿಸರು ಬೇಕು | 1 |
| 2 | ಜ್ಯೋತಿಷ್ಯ ಅಂದರೆ ಏನು? ಹೇಗೆ ಬಂದಿತು? | 6 |
| 3 | ಜನನ– ಜೀವನ–ಮರಣ | 18 |
| 4 | ಸೂರ್ಯ– ಸಿದ್ಧಾಂತ | 23 |
| 5 | ಸೂರ್ಯ–ಕಾರಕ ಗುಣಗಳು | 31 |
| 6 | ಸ್ತ್ರೀಕಾರಕ ಚಂದ್ರ | 35 |
| 7 | 'ಪ್ರಶ್ನೆ' – ಪೃಚ್ಛಕ ... | 40 |
| 8 | ನಕ್ಷತ್ರಗಳಲ್ಲಿ ಚಂದ್ರ ಸಂಚಾರ | 42 |
| 9 | ಜನ್ಮ ರಾಶಿ ಗುಣ ಲಕ್ಷಣ | 51 |
| 10 | ಸಂಗದಿಂದ ಗುಣ ನಿರ್ಣಯ | 58 |
| 11 | ಸವ್ಯ ನಕ್ಷತ್ರ – ಅಪಸವ್ಯ ನಕ್ಷತ್ರ | 62 |
| 12 | ಪರಿವರ್ತನ ಪಾದಗಳು–ನಕ್ಷತ್ರನಿಲ್ದಾಣಗಳ ಉತ್ಪತ್ತಿ ... | 64 |
| 13 | ಗಣಪತಿ ಚಕ್ರ–ಪ್ರಶ್ನ ಕಾಂಡ | 70 |
| 14 | ಮಂಗಳನ ಮಹತ್ವ | 74 |
| 15 | ತಾರಾಪುತ್ರ–ಬುಧ | 80 |
| 16 | ಸಂಖ್ಯಾ ಶಾಸ್ತ್ರ | 89 |
| 17 | ದೇವತೆಗಳ ಪುರೋಹಿತ–ಗುರು | 95 |
| 18 | "ಗೋಚರ" ಎಂದರೇನು? | 108 |
| 19 | ಹನ್ನೆರಡುವರ್ಷ ಚಕ್ರ | 111 |
| 20 | ನೀಚ ರಾಶಿ ಗ್ರಹಗಳ ಯೋಗ | 114 |
| 21 | ಶುಭ ಕಾರಕನೇ ಶುಕ್ರ | 117 |
| 22 | ಗುರು ಅಂಶಿವಶುಕ್ರ | 124 |
| 23 | ಶನಿಯಿಂದ ನಿಂದೆ | 130 |
| 24 | ರಾಹು ಕೇತುಗಳ ವಿಭಿನ್ನ ಗುಣಗಳು | 135 |

# 1

## ಜನಸಾಮಾನ್ಯಕ್ಕೆ ಜೋಯಿಸರು ಬೇಕು

ಹಳ್ಳಿಗೆ ಹೋಗಿ, ಪಟ್ಟಣಕ್ಕೆ ಹೋಗಿ, ಎಲ್ಲಿ ಹೋದರೆ ಅಲ್ಲಿ ಒಬ್ಬರು ಜೋಯಸರು. ಹಿಂದನ ಕಾಲದಲ್ಲಿಯೂ ಅಷ್ಟೆ. ಈಗಿನ ಕಾಲದಲ್ಲಿಯೂ ಅಷ್ಟೆ. ಯಾರಿಲ್ಲದಿದ್ದರೂ ಜೋಯಿಸರು ಮಾತ್ರ ಹಾಜರು. ಊರಿನಲ್ಲಿ ಯಾರು ಗೊತ್ತಿಲ್ಲ, ಏನು ಮಾಡುವುದು? ಚಿಂತೆ ಏನೂ ಬೇಡ. ಊರು ಜೋಯಿಸರು ಎಲ್ಲವನ್ನೂ ಸಲೀಸಾಗಿ ಪತ್ತೆ ಹಚ್ಚುತ್ತಾರೆ. ಬೀದಿಯಲ್ಲಿ ಹೋಗುವವರನ್ನು ಗುರುತಿಲ್ಲದೆ, ಪರಿಚಯ ಇಲ್ಲದೆ ಮಾತನಾಡಿಸಿದರೆ ಮುಖ ಮೂರು ದಿಕ್ಕು ನೋಡುತ್ತೆ. ಆದರೆ ಈ ಹಂಗು ಹವ್ಯಾಸ ಇಲ್ಲದೆ ನೇರ ಮಾತನಾಡಿಸರಬಹುದು. ಏನು ಬೇಕಾದರೂ ಕೇಳಬಹುದು. ಎಷ್ಟು ಹೊತ್ತಿನಲ್ಲಿ ಆದರೂ ಕೇಳಬಹುದು. ಇದು ಅವರ ಕಲ್ಯಾಣ ಗುಣ.

### ಗುಟ್ಟಿನ ಗಣಿ

ವ್ಯವಹಾರದ ಗುಟ್ಟು, ಮನೆ ಗುಟ್ಟು , ಮಂದಿ ಗುಟ್ಟು – ಎಲ್ಲಾ ಗುಟ್ಟುಗಳಿಗೂ ಜೋಯಿಸರೇ ಖಜಾನೆ. ಗುಟ್ಟು ಹೇಳಿದೆನಲ್ಲಾ ಎಂದು ಚಿಂತೆ ಖಂಡಿತ ಬೇಡ. ಜೋಯಿಸರ ಹತ್ತಿರ ಗುಟ್ಟು ಹೇಳಿದರೆ ಅದು ಕಬ್ಬಿಣದ ಪೆಟ್ಟಿಗೆಯಲ್ಲಿಟ್ಟು ಕೀಲಿ ಮರೆತ ಹಾಗೆ. ಎಲ್ಲರ ಗುಟ್ಟುಗಳೂ ಜೋಯಿಸರ ಬಳಿ ಒಂದೇ ತರಹೆ. ಎಲ್ಲಾ ಊರುಗಳಲ್ಲಿ ಒಂದೇ ತರಹೆ. ಜೋಯಿಸರು ಒಂದು ನಮೂನೆ ಗುಟ್ಟಿನ ರಾಜ. ಅದಕ್ಕೇ ಜೋಯಿಸರು ಅಂದರೆ ಎಲ್ಲರಿಗೂ ಪ್ರಾಣ.

ಜ್ಯೋತಿಷ್ಯ ಗೊತ್ತಿದೆ ಅಂತ ಜೊಯಿಸರು. ಜನಗಳಿಗೆ ಜ್ಯೋತಿಷ್ಯ ಅಂದರೆ ಅಪಾರ ಪ್ರೇಮ. ಜೋಯಿಸರು ಅಂದರೆ ಎಲ್ಲರಿಗೂ ಇಷ್ಟ. ಊರಿನಲ್ಲಿ ಏನೇ ನಡೆಯಲಿ ಅದು ಅವರಿಗೆ ಗೊತ್ತಾಗದೆ ನಡೆಯುವ ಹಾಗಿಲ್ಲ, ಇದು ಪ್ರತೀತಿ. ಒಂದು ನಂಬಿಕೆ. ಗಾಢವಾದ, ಆಳವಾದ ನಂಬಿಕೆ. ಪುರಾತನ ಕಾಲದಿಂದ ಬಂದದ್ದು ಈ ನಂಬಿಕೆ. ಯಾರಾದರೂ ಸತ್ತರು ಅಂದರೆ "ಜೋಯಿಸರು ಮೊದಮೇ ಹೇಳಿದ್ದರು" ಅಂದಾರು. ಹೇಳಲಿಲ್ಲ – 'ಅವರಿಗೆ ಗೊತ್ತಿತ್ತು. ಆದರೆ ನಮಗೆ ಬೇಜಾರಾಗುತ್ತೆ ಅಂತ ಹೇಳಲಿಲ್ಲ' ಅವರ ಕಡೆಗೇ ಜನಗಳವಾದ. ಈ ಪ್ರೀತಿ ಹಿಂದಿನ ಕಾಲದಿಂದ ತಲೆಮಾರಾಗಿ ಬಂದ ಜಾಡ್ಯ. ಜೋಯಿಸರು ಈ ಸಮಾಜಕ್ಕೆ ಎಂದೆಂದಿಗೂ ಅತ್ಯಗತ್ಯದ ವ್ಯಕ್ತಿ!

ಈ ಪಟ್ಟ ಜೋಯಿಸರಿಗೆ ಹೇಗೆ ಬಂದಿತು? ಯಾರು ಕಟ್ಟಿದರು? ಜ್ಯೋತಿಷ್ಯ ಏನಾದರೂ ಮೋಸ ಮಾಡೀತೇ? ಮಾಡಿತು, ಒಂದು ವರ್ಷವೇ ಎರಡು ವರ್ಷವೇ? ಒಂದು ಸಲವೇ? ಎರಡು ಸಲವೇ? ಊರಿಗೆ ಒಬ್ಬರೇ ಜೋಯಿಸರು! ಈಗೀಗ ಬೀದಿ ಬೀದಿಗೆ ಒಬ್ಬರು ಇದ್ದಾರೆ. ಹೇಗೆ ಬದುಕುತ್ತಾರೆ? ಎಲ್ಲರೂ ಒಟ್ಟಿಗೇ ಸೇರಿ ಜನಗಳಿಗೆ ಮೋಸ ಮಾಡುತ್ತಾರೆಯೇ ? ಅಗುತ್ತದೆಯೇ? ಅದೂ ಇಲ್ಲ.

ಇವನು ದೊಡ್ಡ ಮನುಷ್ಯ. ಕಾರುಬಾರು ಅಸಾಧಾರಣ. ಅವನ ಜೋಡಿ ಜೋಯಿಸರು ಇದ್ದೇ ಇರುತ್ತಾರೆ. ಲಕ್ಷಾಧೀಶ್ವರ, ವ್ಯಾಪಾರಿ, ಏಜೆಂಟು

ಎಲ್ಲರಿಗೂ ಜೋಯಿಸರು ಬೇಕು. ಏನು ಮಾಡಬೇಕಾದರೂ "ಜೋಯಿಸರನ್ನು ಒಂದು ಮಾತು ಕೇಳಿ ಆಮೇಲೆ ಆ ಯೋಚನೆ". ಮನಸ್ಸಿನಲ್ಲಿ ಅಂದು ಕೊಳ್ಳುತ್ತಾರೆ.

ಮದರಾಸು, ಬೊಂಬಾಯಿ, ದಿಲ್ಲಿ, ಕಲ್ಕತ್ತಾ, ಕೆಂಗೇರಿ, ಗುಡೇಮಾರನ ಹಳ್ಳಿ ಎಲ್ಲ ಕಡೆಗಳಲ್ಲಿಯೂ ಜೋಯಿಸರ ಪ್ರತಿಭೆ ಇದ್ದೇ ಇರುತ್ತದೆ. ಚುರುಕು ಬುದ್ದಿ–ಅಸಾಧಾರಣ ಇವನ ತಲೆ. ಈ ಬಿರುದು ಹೊರಡೆದಿರುವ ವ್ಯಾಪಾರಿಗೂ ಒಂದೊಂದು ಸಲ ತಲೆ ಮಂಕು ಮಂಕಾಗುತ್ತೆ. ಆಗ ಅವನು ಓಡುವುದು ಜೋಯಿಸರಲ್ಲಿಗೆ.

## ಗ್ರಹಚಾರ

ನೂರು ರೂಪಾಯಿ, ಸಾವಿರ ರೂಪಾಯಿ ಪರವಾಗಿಲ್ಲ. ಸಾವಿರ ಸಾವಿರ ರೂಪಾಯಿ ಬಂಡವಾಳ ಹಾಕಬೇಕು. ಹೆದರಿಕೆ, ಪ್ರತಿಯೊಬ್ಬನಿಗೂ ಹೆದರಿಕೆ. ಒಂದು ಸಲ ಜೋಯಿಸರನ್ನು ಗ್ರಹಚಾರ ಹೇಗಿದೆಯೋ? ಅಂತ ಕೇಳದವರಿಲ್ಲ.

ಕೇಳಿದ್ದೇ ಕೇಳುವರು. ಪದೇ ಪದೇ ಕೇಳುವರು. ಮನಸ್ಸಿಗೆ ಗೊಂದಲ ಅಂದರೆ ಜೋಯಿಸರೇ ವೈದ್ಯರು. ಕೋಪ ? ಜೋಯಿಸರಿಗೆ ಕೋಪ ಎಲ್ಲಿಯದು ? ಯಾವಾಗಲೂ ನಗು. ಯಾವಾಗಲೂ ಸಂತೋಷ. ಶಾಂತಿ ಅವರ ಮುಖದಲ್ಲಿರುತ್ತೆ. ಊಟಕ್ಕಿರಲಿ, ಇಲ್ಲದಿರಲಿ, ಶಾಂತಿ ಸಂತೋಷಗಳ ತವರು ಮನೆ ಜೋಯಿಸರು. ಉಪವಾಸ ಇರುವ ಜೋಯಿಸರೇ ಇಲ್ಲ–ಈ ಲೋಕದಲ್ಲಿ! ಹೇಗೆ ಸಾಧ್ಯ?

ಬೇಡ, ತಲೆ ಕೆಡಿಸಿಕೊಳ್ಳುವುದು ಬೇಡ. ಜ್ಯೋತಿಷ್ಯದಲ್ಲಿ ಅಡಗಿರುವ ನೈತಿಕ ಸತ್ಯ, ಅಚ್ಚಳಿಯದ ಸತ್ಯ, ಇದೇ ಕಾರಣ. ಸಮಾಜ ಕಷ್ಟವಿಲ್ಲದೆ ಮುಂದಕ್ಕೆ ಸಾಗಬೇಕು, ಎಂದರೆ ಜ್ಯೋತಿಷ್ಯದ ಸ್ಥಾನ ಅದಕ್ಕೆ ಮೀಸಲು.

## ಸಮಾಜ ಕಲ್ಯಾಣ

ಸಂಸಾರ ಅಂದಮೇಲೆ ಒಡಕುತೊಡಕುಗಳು ಸಾಮಾನ್ಯ. ಮಗನ ಮದುವೆ, ಹೆಣ್ಣು "ಮಹಾಲಕ್ಷ್ಮಿ"ಯೋ "ಮಹಾಮಾರಿ"ಯೋ ಯಾರಿಗೆ ಗೊತ್ತು ? ಜಾತಕ ಒಂದುಸಲ ರಜೋಯಿಸರ ಕೈಯಲ್ಲಿ ಹೋಗುತ್ತೆ ಅವರು "ಅಸ್ತು" ಅಂದರೆ ಬರುವಳು ಮಹಾಲಕ್ಷ್ಮಿ, ನಕರ ಅಂದರೆ ಮಾರೀನೇ ! ಇದರಲ್ಲಿ ಸಂದೇಹವೇ ಇಲ್ಲ. ಮನೆ ಯಜಮಾನನಿಗೆ ಎಷ್ಟೇ ಆಸೆ ಇರಲಿ "ಎಷ್ಟೇದುಡ್ಡು ಬರಲಿ, ಜೋಯಿಸರು ಇಲ್ಲ– ಹೊಂದಾಣಿಕೆಲ್ಲ" ಅಂದರು. ಮುಗಿಯಿತು ಕಥೆ.

ಹುಡುಗನಿಗೆ ಚಿಕ್ಕವಯಸ್ಸು ಯರನ್ನೋ ಪ್ರೀತಿಮಾಡುತ್ತಾನೆ. ಅವಳನ್ನೇ ಅಂತ ಮದುವೆ ಅಗುವುದು. ಆಗಲಿಲ್ಲ ಅಂದರೆ ಹಗ್ಗ ಹಾಕಿಗೊಳ್ಳುತ್ತಾನೆ. ಭೂಲೋಕದ ಚಿತೆಯೆಲ್ಲ ಅವನ ತಲೆಯಲ್ಲಿಯೇ ಇದೆ. ಆಗುವಗಾಗಿಲ್ಲ ಅಂದರೂ ಅವನು ಬಿಡ. ಏನು ಮಾಡುವುದು ? ಜೋಯಿಸರೇ ಅವನಿಗೆ ಮದ್ದು. " ಹುಡುಗನಿಗೆ ಅಪಾಯ. ಕುಜ ದೋಷ ವಿಪರೀತ. ಪ್ರಾಣಹಾನಿ ಮಾನಹಾನಿ! " ಅಂದರೂ ಜೋಯಿಸರು. ಅವನ ಪ್ರೇಮ ಎಗರಿತು ಆಕಾಶಕ್ಕೆ. ದೊಡ್ಡದಾಗಿ ನಿಟ್ಟುಸಿರು ಬಿಟ್ಟು "ನನ್ನ ಹಣೆಯಲ್ಲಿ ಬರೆಯಲಿಲ್ಲ" ಅಂದು ಮೆತ್ತಗೆ ಆಗಿಬಿಡುತ್ತಾನೆ.

ಹಾಗೆಯೇ " ಪ್ರಾಣ ಕಳೆದುಕೊಳ್ಳುತ್ತಾನೆ" ಎಂದು ಕೆರೆದಂಡೆವರೆವಿಗೆ ಬಂದವನಿಗೆ ಜೋಯಿಸರು ಸಿಕ್ಕಿದರೆ, ಅವನಿಗೆ ಕೆರೆ ಬಹಳ ದೂರ ಆಗಿಬೆಡುತ್ತೆ. ಜೀವದ ಮೇಲೆ ಮತ್ತೆ ಆಸೆ ಹುಟ್ಟುತ್ತೆ.

ಇಂತಹುದು ಎಷ್ಟೋ ? ಬಲ್ಲವರಾರು ? ಸಮಾಜಕ್ಕೆ ಜ್ಯೋತಿಷ್ಯದ ಸೇವೆ ಅಷ್ಟಿಷ್ಟು ಅನ್ನುವಂತಿಲ್ಲ. ಸಮಾಜ ಕಲ್ಯಾಣ–ಲೋಕ ಕಲ್ಯಾಣ ಧ್ಯೇಯ. ಅವರದೇ ಸರಿ!

ಕೆಟ್ಟದ್ದು ಅಂದರೆ ಭಯ ಕೆಟ್ಟವರಿಗೆ ಅಭಯ. ದುಡ್ಡು ಹೋಯಿತು, ಮನೆ ಹೋಯಿತು, ಮಾನ ಹೋಗುತ್ತೋ ಏನೋ? ಜೋಯಸರೇ ಅದಕ್ಕೆ

ಅಗಾಧ ಶಕ್ತಿ. ಈಗ ಎಷ್ಟು ಮಂದಿ ಜೋಯಿಸರು? ಎಲ್ಲರೂ ಜೋಯಿಸರೇ! ಎಷ್ಟು ಮಂದಿ ತಿಳಿದವರು? ಯಾರಿಗೆ ಗೊತ್ತು? ನಂಬುವವರು ಮಾತ್ರ ಬಹಳ ಜನ. ಏನೇ ಹೇಳಲಿ, ಎಷ್ಟೇ ದುಡ್ಡು ಸಂಪಾದನೆ ಮಾಡಲಿ, ಸಮಾಜದಲ್ಲಿ ಅವರನ್ನು ಕಂಡರೆ ಈಗಲೂ ನಂಬಿಕೆ. ಆ ನಿರ್ಧಾರದ ಬದಲಾವಣೆಯೂ ಇಲ್ಲ. ಅದೇ ಅದೃಷ್ಟ ಈಗಿನ ರೋಯಿಸರದು!

# 2

## ಜ್ಯೋತಿಷ್ಯ ಅಂದರೆ ಏನು ? ಹೇಗೆ ಬಂದಿತ ?

ಜೋಯಿಸರು ಎಲ್ಲರಿಗೂ ಬೇಕಾದವರು. ಇದರಿಂದ ಅವರಿಗೆ ಒಂದು ಸ್ಥಾನ, ಸಮಾಜದಲ್ಲಿ ಮೀಸಲು, ಈ ಶಾಸ್ತ್ರ ಎಲ್ಲಿಯದು ? ಈ ಕುತೂಹಲ ಸಾಮಾನ್ಯ. "ಜ್ಯೋತಿ"ಯಿಂದ "ಜ್ಯೋತಿಷ್ಯ". ಜ್ಯೋತಿಯ ವಿಚಾರ ಹೇಳುವ ಶಾಸ್ತ್ರ .

ಜ್ಯೋತಿ ಅಂದರೆ ಬೆಳಕು. " ಬೆಳಕು ಆಯಿತು " ಅಂದರೆ ಎಲ್ಲೆಲ್ಲಿಯೂ ಬೆಳಕು. ನಮ್ಮ ಸುತ್ತ ಇರುವ ವಸ್ತುಗಳು, ಪ್ರಾಣಿಗಳು ಇತ್ಯಾದಿ ನಮಗೆ ಸ್ಪಷ್ಟವಾಗಿ ಕಾಣುತ್ತವೆ. ಆಗ " ಬೆಳಕು ಆಯಿತು " ಎನ್ನುತ್ತಾರೆ. ನಮ್ಮ ಕಣ್ಣಿಗೆ ಏನೂ ಕಾಣುವುದಿಲ್ಲ. ಆಗ " ಕತ್ತಲು " ಎನ್ನುತ್ತಾರೆ.

" ಬೆಳಕು ಆಯಿತು " ಅಥವಾ ಬೆಳಗಾಯಿತು. ಈ ಬೆಳಕು ಎಲ್ಲಿಂದ ಬಂದಿತು? ಎಲ್ಲಾ ಕಡೆಯಲ್ಲಿಯೂ ಒಂದೇ ಸಮ. ಈ ಬೆಳಕು. ಆಕಾಶದಿಂದ

ಈ ಬೆಳಕು. ಅದೂ ಒಂದೇ ಕಡೆಯಿಂದ. ಅದೇ ಬೆಳಕಿನ ಕೇಂದ್ರ, ಆ ಬೆಳಕಿನ ಕೇಂದ್ರವೇ " ಸೂರ್ಯ ". ಸೂರ್ಯನು ಕಾಣಿಸಿದರೆ ಬೆಳಗಾಯಿತು; ಮರೆಯಾದರೆ ಕತ್ತಲು.ಸೂರ್ಯನಿಂದ ಬೆಳಕು. ಸೂರ್ಯನೇ ಈ ಶಾಸ್ತ್ರಕ್ಕೆ ಮೂಲಭೂತ ಕಾರಣ. ಅವನ ಕಿರಣಗಳ ಮಹಿಮೆಯ ಮಾಹಿತಿಯೇ ಈ " ಜ್ಯೋತಿಷ್ಯ ".

ಆಕಾಶ ! ಇಲ್ಲಿ ಯಾವ ಪದಾರ್ಥ ಬೇಕಾದರೂ ಇರಬಹುದು. ಓಡಾಡಬಹುದು. ಇದಕ್ಕೆ ಎಲ್ಲೆ ಇಲ್ಲ. ಮಿತಿ ಇಲ್ಲ. ಇನ್ನು ಇದನ್ನು ಕ್ಲುಪ್ತವಾಗಿ ಅಳೆಯುವುದು ಹೇಗೆ ? ಇದರಲ್ಲಿ ತಾನೆ ಭೂಮಿ, ಸೂರ್ಯ, ಚಂದ್ರ ಮುಂತಾದ ಗ್ರಹಗಳ ಸಂಚಾರ ?

ಆಕಾಶದಲ್ಲಿ ನಕ್ಷತ್ರಗಳು. ಇವುಗಳಿಗೆ ಚಲನೆ ಇಲ್ಲ. ಇದ್ದರೂ, ಬಹಳ ಸ್ವಲ್ಪ. ಈ ಕಾರಣ, ನಕ್ಷತ್ರಗಳ ಸಹಾಯದಿಂದ ಆಕಾಶವನ್ನು ಅಳೆದರು.

ಈ ನಕ್ಷತ್ರಗಳನ್ನು ಇಪ್ಪತ್ತೇಳು ಗುಂಪುಗಳನ್ನಾಗಿ ವಿಂಗಡಿಸಿದರು. ಅವುಗಳಿಗೆ ಹೆಸರುಗಳನ್ನು ಕೊಟ್ಟು ಗುರುತಿಸಿದರು. ವೇದಗಳಲ್ಲಿಯೂ ಜ್ಯೋತಿಷ್ಯವಿದೆ. ನಕ್ಷತ್ರಗಳ ವಿಷಯ ಮಾತ್ರ ಹೇಳಲ್ಪಟ್ಟಿದೆ. ಗ್ರಹಗಳ ವಿ ಷಯ ಅತ್ಯಲ್ಪ. ಇದು ಕೆಲವರ ಅಭಿಪ್ರಾಯ.

ವಸಿಷ್ಠಾದಿ ಋಷಿಗಳು ಸಂಹಿತೆಗಳನ್ನು ಬರೆದರು. ಅದರಲ್ಲಿ ಗ್ರಹಗಳು, ನಕ್ಷತ್ರಗಳೇ ವಿಚಾರ. ಪ್ರತಿ ನಕ್ಷತ್ರದಲ್ಲಿ ಈ ಗ್ರಹಗಳು ಸಂಚರಿಸುವಾಗ ಅವು ಬೀರುವ ಸ್ವಭಾವವನ್ನು ವಿಧವಿಧವಾಗಿ ಬಣ್ಣಿಸಿದ್ದಾರೆ.

ಈ ನಕ್ಷತ್ರಗಳಲ್ಲಿ ಮೊದಲನೆಯದು ಅಶ್ವಿನೀ ನಕ್ಷತ್ರ ಕೊನೆಯದೇ ರೇವತೀ ನಕ್ಷತ್ರ.

## ಗ್ರಹಗಳು ಸೂರ್ಯನ ಸುತ್ತ ತಿರುಗಬೇಕು

ಒಂದು ದಾರದ ಕೊನೆಗೆ ಚೆಂಡು ಕಟ್ಟಿ ಇನ್ನೊಂದು ಕೊನೆ ಹಿಡಿದು ಗಿರಗಿರನೆ ತಿರುಗಿಸಿದರೆ, ಆ ಚೆಂಡು ಏನು ಮಾಡುತ್ತದೆ? ನಮ್ಮ ಸುತ್ತಲೂ ಬಿರುಸಾಗಿ ಸುತ್ತುತ್ತದೆ. ದಾರವನ್ನು ಬಿಟ್ಟರೆ ಅದೇ ವೇಗದಲ್ಲಿ ನಮ್ಮಿಂದ

ದೂರ ಹೋಗಿಬಿಡುತ್ತವೆ. ದಾರದ ಸಹಾಯದಿಂದ ತನ್ನ ದಾರಿಯನ್ನು ಬಿಡಲಾರದು. ಈ ದಾರದ ಹಿಡಿತಕ್ಕೆ ಆಕರ್ಷಣೆ ಎಂದು ಕರೆಯುತ್ತಾರೆ.

" ಆಕರ್ಷಣೆ " ಅಂದರೆ ತನ್ನ ಬಳಿಗೆ ಎಳೆದುಕೊಳ್ಳುವುದು. ಭೂಮಿಯಿಂದ ಒಂದು ಕಲ್ಲನ್ನು ಮೇಲೆಸೆದರೆ, ಅದು ಮೇಲೆ ಏನೋ ಹೋಗುತ್ತದೆ. ಆದರೆ ಪುನಃ ಕೆಳಗೇ ಬೀಳುವುದು. ಭೂಮಿಯು ಕಲ್ಲನ್ನು ತನ್ನ ಕಡೆಗೇ ಎಳೆದುಕೊಳ್ಳುತ್ತದೆ. ಇದೇ "ಆಕರ್ಷಣೆ".

ಮೊನ್ನೆ ಮೊನ್ನೆ ರಷ್ಯನರು ಕ್ಷಿಪಣೆ ಹಾರಿಸಿದರು. ಅದು ವೇಗವಾಗಿ ಭೂಮಿಯನ್ನು ಬಿಟ್ಟು ಆಕಾಶದತ್ತ ಬಿರುಸಾಗಿ ಹೊರಟಿತು. ಆದರೆ ಭೂಮಿಯನ್ನು ಬಿಟ್ಟತೇನು ? ತನ್ನ ವಿಶಿಷ್ಟ ಶಕ್ತಿಯನ್ನು ಬಳಸಿಕೊಂಡು ಭೂಮಿಯನ್ನು ಬಿಟ್ಟು ಹೋಗಲು ಎಷ್ಟು ಪ್ರಯತ್ನ ಮಾಡಿತು! ಆದರೆ ಆ ವೇಗ ಮತ್ತು ಈ ಆಕರ್ಷಣೆ ಇವೆರಡರ ಘರ್ಷಣೆಯ ಫಲವಾಗಿ ಭೂಮಿಯನ್ನು ಬಿಡದೆ ಭೂಮಿಯ ಸುತ್ತಲೂ ತಿರುಗಿತು ! ಭೂಮಿಯ ಈ ಆಕರ್ಷಣೆ ಎಷ್ಟು ವಿಚಿತ್ರ ! ಕ್ಷಿಪಣೆ ತನ್ನಿಂದ ನೇರದಾರಿ ಹಿಡಿಯುವುದನ್ನು ತಪ್ಪಿಸಿ ತನ್ನ ಸುತ್ತ ದಾರಿಯಲ್ಲಿ ತಿರುಗುವಂತೆ ಮಾಡಿತು !

ಇದೇ–ರೀತಿ ಸೂರ್ಯನಿಗೂ ಆಕರ್ಷಣೆ ಇದೆ. ಎಲ್ಲ ಗ್ರಹಗಳಿಗೂ ಆಕರ್ಷಣೆ ಇದೆ. ಆದರೆ ಸೂರ್ಯನು ತೇಜಸ್ವಿ. ಇಂತಹ ಶಕ್ತಿಯ ಮಹಾ ಕೇಂದ್ರ, ಆದುದರಿಂದ ತನ್ನ ಸುತ್ತಲೂ ಎಲ್ಲವನ್ನೂ ತಿರುಗುವಂತೆ ಮಾಡುತ್ತಾನೆ!

## 'ದಿನ, ವಾರ' ಎಂದರೆ ಏನು ?

ಭೂಮಿ ಗುಂಡಾಗಿದೆ. ಸಂದೇಹ ಈಗ ಇಲ್ಲ. ಕ್ಷಿಪಣೆಯಲ್ಲಿ ಯಾನಮಾಡಿದ ಸ್ತ್ರೀ ಪುರುಷರೇ ಇದನ್ನು ಪ್ರತ್ಯಕ್ಷವಾಗಿ ನೋಡಿದ್ದಾರೆ. ಸೂರ್ಯನ ಬೆಳಕು ಬೆಚ್ಚಗಿರುತ್ತದೆ. ಈ ಕಾರಣ ಮಧ್ಯಾಹ್ನದ ಹೊತ್ತು ತುಂಬಾ ಶೆಖೆ. ಬಿಸಿ ಮಾಡುವುದರಿಂದ 'ಬಿಸಿಲು' ಎಂದರು.

ಬಿಸಿಲಿನ ತಾಪದಿಂದ ಗಾಳಿ ಬಿಸಿಯಾಗುತ್ತವೆ. ನೀರನ್ನು ಬಿಸಿಮಾಡಿದರೆ ಆವಿಯಾಗಿ ಮೇಲಕ್ಕೆ ಹೋಗುತ್ತವೆ. ಇನ್ನು ಗಾಳಿ? ಕೇಳಬೇಕೆ? ಅದೂ ಇನ್ನೂ

ಬೇಗ ಮೇಲಕ್ಕೆ ಹೋಗುತ್ತದೆ.

ಆ ಗಾಳಿಯ ಜಾಗ ಖಾಲಿ. ಆ ಖಾಲಿ ಜಾಗದಲ್ಲಿ ತಣ್ಣನೆಯ ಗಾಳಿ ಚಲಿಸುತ್ತದೆ. ಆಗ ಗಾಳಿ ಬೀಸುತ್ತದೆ ಅಂದರು. ಈ ಗಾಳಿ ಭೂಮಿಯ ಸುತ್ತ ತಿರುಗುತ್ತಿರುತ್ತದೆ. ಇದಕ್ಕೆ ವಾಯು ಮೇಖಲೆ (Air belt) ಎಂದರು. ಭೂಮಿಯು ಗುಂಡಾಗಿದೆ. ಗುಂಂಡಾಗಿದೆ ಚಲಿಸಬೇಕು, ಚಲಿಸುತ್ತೆ. ಆಗ ಕತ್ತಲಿನ ಉಳಿದ ಅರ್ಧ ಭಾಗವೂ ಸೂರ್ಯನ ಬೆಳಕಿಗೆ ಬೀಳುತ್ತವೆ. ಆಗ ಇಡೀ ಭೂಮಿಯೆಲ್ಲಾ ಬೆಳಕಿಗೆ ಬಿದ್ದಂತಾಯಿತು.

ಬೆಳಕು ಬೀಳುವಷ್ಟು ಕಾಲವೇ 'ದಿನ'. ಬೆಳಕು ಬೀಳದಿರುವಷ್ಟು ಹೊತ್ತು 'ರಾತ್ರಿ' ಆಯಿತು. ಭೂಮಿ ಒಂದು ಸಲ ತನ್ನ ಬುಡದಮೇಲೆ ತಿರುಗಲು ಎಷ್ಟು ಹೋತ್ತು ಹಿಡಿಯುತ್ತದೆ ? ಆ ಕಾಲಮಾನಕ್ಕೆ ' ದಿವಸ 'ಎಂದು ಹೆಸರು. ಈ ದಿವಸದಲ್ಲಿ ' ದಿನ–ರಾತ್ರಿ ' ಎರಡೂ ಆಗುತ್ತವೆ. ಇದಕ್ಕೇ ' ಅಹೋ–ರಾತ್ರಿ ' ಎಂದರು.

ಈ ಶಾಸ್ತ್ರಕ್ಕೆ ' ಅಹೋ–ರಾತ್ರಿ ' ಶಾಸ್ತ್ರ ಎಂದು ಹೆಸರಾಯಿತು. ಇದರಲ್ಲಿ ಮೊದಲನೆಯ ಮತ್ತು ಕೊನೆಯ ಅಕ್ಷರಗಳನ್ನು ಬಿಟ್ಟರೆ " ಹೋರಾ " ಎಂದಾಯಿತು. ಋಷಿಗಳು ಜ್ಯೋತಿಷ್ಯಕ್ಕೆ "ಹೋರಾಶಾಸ್ತ್ರ" ಎಂದು ನಾಮಕರಣ ಮಾಡಿದರು.

ಭೂಮುಯ ಸುತ್ತಲೂ ಎಲ್ಲಾ ಭಾಗಗಳಿಗೂ ಬೆಳಕು ಬೀಳುವ ಕಾಲಕ್ಕೆ 'ದಿವಸ' ಅಂದರು. ಈ ದಿವಸವನ್ನು 24 ಭಾಗಮಾಡಿ 'ಘಂಟೆ' ಅಂದರು. 'ಹೋರಾ' ಅನ್ನುವ ಶಬ್ದದಿಂದಲೇ 'ಹವರ್' (ಅವರ್) ಎಂಬ ಇಂಗ್ಲೀಷ್ ಶಬ್ದ ಬಂದಿತೋ? ಒಂದು ಘಂಟೆಯ ಐದನೆಯ ಎರಡು ಭಾಗಕ್ಕೆ 'ಘಟಿ' ಎಂದು ಹೆಸರು. ಈ 'ಘಂಟೆ' ಅಥವಾ 'ಘಟಿ' ಕಾಲಮಿತಿಯನ್ನು ಅಳೆಯುವ ಯಂತ್ರಕ್ಕೆ 'ಘಟೀಯಂತ್ರ' ಅಥವಾ 'ಘಟಿಯಾರ' ಗಡಿಯಾರ ಎಂಬ ಪದ ಬಳಕೆಗೆ ಬಂದಿತು. ಆದುದರಿಂದ ಈ ಕಾಲಮಾನದ ಮೂಲಭೂತ ಕಾರಣ ಸೂರ್ಯನ ಬೆಳಕು.

## ಹೋರೆಯ ಅಧಿಪತಿಗಳು

ಸೂರ್ಯನ ಸುತ್ತ ಗ್ರಹಗಳು ಚಲಿಸುತ್ತವೇ. ಗ್ರಹಗಳಿಗೂ ಆಕರ್ಷಣಾ ಶಕ್ತಿ ಇದೆ. ಪರಸ್ಪರ ಆಕರ್ಷಣ ಶಕ್ತಿಗಳ ಘರ್ಷಣೆಯಿಂದ ಒಂದೊಂದು ಗ್ರಹಕ್ಕೂ ತನ್ನದೇ ದಾರಿಆಗುತ್ತೆ. ಈ ದಾರಿಯಲ್ಲಿ ಸೂರ್ಯನನ್ನು ಸುತ್ತುತ್ತದೆ. ಒಂದೊಂದು ಗ್ರಹಕ್ಕೆ ಒಂದೊಂದು ದಾರಿ ಆಯಿತು. ಎಲ್ಲಾ ಗ್ರಹಗಳು ಒಂದೇ ದಾರಿಯಲ್ಲಿ ಸೂರ್ಯನನ್ನು ಸುತ್ತುವುದಿಲ್ಲ. ಆ ಗ್ರಹದ ದಾರಿ, ಅದರ ಆಕರ್ಷಣಾ ಶಕ್ತಿಗೆ ಅನುಗುಣ.

ಗ್ರಹಗಳು ತಮ್ಮ ತಮ್ಮ ದಾರಿಯಲ್ಲಿ ಸೂರ್ಯನನ್ನು ಸುತ್ತುತ್ತವೆ. ಈ ದಾರಿಗೆ "ಪಥ" ಎಂದರು. ಈ ಪಥಗಳಿಗೂ ಒಂದು ಕ್ರಮ.

1) ಶನಿ, 2) ಗುರು, 3) ಮಂಗಳ, 4) ಸೂರ್ಯ, 5) ಶುಕ್ರ, 6) ಬುಧ, 7) ಚಂದ್ರ ಇದೇ ಕ್ರಮ.

ಭೂಮಿಗೆ ಶನಿಯೇ ದೂರದಲ್ಲಿರುವ ಗ್ರಹ. ಚಂದರನೇ ಹತ್ತಿರದಲ್ಲಿ ದಾರಿ ಉಳ್ಳ ಗ್ರಹ.

ಈ ಕ್ರಮಗಳು 24 ಹೋರಾ ಕಾಲಗಳು. ಮೊದಲು ರವಿ, ಆಮೇಲೆ ಶುಕ್ರ, ಬುಧ, ಚಂದ್ರ ಇತ್ಯಾದಿ. ಮಾರನೆಯ ದಿನ ಬೆಳಗಿನ ಮೊದಲನೆಯ ಹೋರೆಯು ಚಂದ್ರನದಾಗುವುದು. ಎರಡನೇಯದಿನ, ಮಂಗಳ, ಮೂರನೇಯ ದಿನ ಬುಧ, ನಾಲ್ಕನೆಯದು ಗುರು, ಐದು ಶುಕ್ರ, ಆರು ಶನಿ ರವಿ ಆದಿಯಾಗಿ ಬರುವುದು. ಯಾವದಿನ ಯಾವ ಗ್ರಹದ ಹೋರೆಯು ಉದಯ ಹೋರೆಗೆ ಹೋರೆಗೆ ಬರುವುದೋ ಅದೇ ಆ ದಿನದ ಹೆಸರಾಯಿತು.

ಗೊತ್ತಾದ ಕಾಲದಲ್ಲಿ ಪುನಃ ಪುನಃ ಏನಾದರೂ ಬಂದರೇ ಅದಕ್ಕೆ "ವಾರ" ಅಂದರು. ಇದು ಸಂಸ್ಕೃತ ಶಬ್ದ. ಪದೇ ಪದೇ ಮಂತ್ರ ಹೇಳುತ್ತಾರೆ. ಅದಕ್ಕೆ "ವಾರಂ ವಾರಂ ಜಪೇನ್ಮಂತ್ರಂ ಯಾವತ್ ಸಿದ್ಧಿ ಮವ್ಯಾಪ್ಸ್ಯತಿ"

ಎಂದು ಹೇಳಿದರೆ ಮಂತ್ರ ಸಿದ್ಧಿಯಾಗುವವರೆಗೆ ಜಪ ಮಾಡಬೇಕು ಎಂದರ್ಥ. 'ವಾರ', ಎಂದರೇ ಪುನಃ ಪುನಃ ಬರುವುದು.

ಪ್ರತಿ ಎಂಟನೇಯ ದಿನ ಅದೇ ವಾರ ಪುನಃ ಬರುತ್ತೆ. ಈ ಕಾರಣ ವಾರ ವಾರ ಎಂದು ಕರೆದರು. ಭಾನುವಾರ, ಸೋಮವಾರ ಎಂಬ ಕ್ರಮ ಬಂದಿದ್ದು ಹೀಗೆ.

ಶ್ರೀಮದ್ಭಾಗವತದಲ್ಲಿ ನಾರದರು ಪ್ರಾಚೇತಸರಿಗೆ ಉಪದೇಶ ಮಾಡಿದಾಗ **"ಯಥೈವ ಸೂರ್ಯತ್ ಪ್ರಭವಂತಿ ವಾರಃ ಪುನಶ್ಚ ತಸ್ಮಿನ್ ಪ್ರವಿಶಂತಿ ಕಾಲೇ"** ಎಂದರು. ಯಾವ ರೀತಿಯಾಗಿ ಸೂರ್ಯನಿಂದ ವಾರಗಳು ಹುಟ್ಟಿ ಅದೇ ಸೂರ್ಯನಲ್ಲಿ ಅಂತ್ಯದಲ್ಲಿ ಲೀನವಾಗಿರುತ್ತವೇಯೋ ಅಂತೆಯೇ................"

ವಾರಗಳು ರವಿಯಿಂದ ಪ್ರಾರಂಭವಾಗಿ ರವಿಯಲ್ಲಿ ಮುಕ್ತಾಯವಾಗುತ್ತವೆ. ಆದುದರಿಂದ ಇರುವುದ ಏಳು ವಾರಗಳೇ ಬೇರೆ ವಾರ ಮಧ್ಯೆ ಬರುವ ಹಾಗಿಲ್ಲ.

## ವರ್ಷ ಹೇಗೆ ಬಂದಿತು?

ಎಲ್ಲ ಗ್ರಹಗಳೂ ಸೂರ್ಯನ ಆಕರ್ಷಣೆಗೆ ಬಲಿ. ತಮ್ಮ ತಮ್ಮ ಪಥದಲ್ಲಿ ರವಿಯ ಸುತ್ತಲೂ ಸರ್ವದಾ ತಿರುಗುತ್ತವೆ. ರವಿಯ ಆಕರ್ಷಣೆಗೂ ಗ್ರಹಗಳ ಆಕರ್ಷಣೆಗೂ ಘರ್ಷಣೆ ಆಗಿ ರವಿಗೂ ಒಂದು ಚಲನ ಉಂಟಾಗುವುದು. ಆದುದರಿಂದ ರವಿಯೂ ಸಹ ತನ್ನದೇ ಆದ ದಾರಿಯಲ್ಲಿ ಆಕಾಶವನ್ನು ಸುತ್ತುತ್ತಾನೆ.

ಆಕಾಶದಲ್ಲಿ ನಕ್ಷತ್ರಗಳು. ಇವುಗಳಿಗೆ ಚಲನ ಶಕ್ತಿ ಅತ್ಯಲ್ಪ. ಇದೇ ಗ್ರಹ ಚಲನೆಯ ಗುರಿತಿಗೆ ಸುಲಭಮಾರ್ಗ. ಅಶ್ವಿನೀ ನಕ್ಷತ್ರದಿಂದ ಪ್ರಾರಂಭ, ರೇವತೀ ನಕ್ಷತ್ರ ಕೊನೆಯದು. ಈ ನಕ್ಷತ್ರಗಳ ಗುಂಪಿನಲ್ಲಿಯೇ ಗ್ರಹಗಳು ನಡೆಯಬೇಕು. ಅದೇ ರೀತಿ ಸೂರ್ಯನೂ ಸುತ್ತುತ್ತಾನೆ. ಈ ರೀತಿ ನಕ್ಷತ್ರಗಳನ್ನು

ಒಂದು ಸಲ ಸಂಪೂರ್ಣ ಸುತ್ತು ಬಂದರೆ ಆಗ ಆಕಾಶದಲ್ಲಿ ಒಂದು ಸುತ್ತು ಬಂದಂತೆ ಆಯಿತು. ಭೂಮಿಯು ಒಂದು ಸಲ ಸುತ್ತುವುದಕ್ಕೆ ಒಂದು ದಿವಸ ಬೇಕು. ಈ 'ದಿವಸ'ದ ಕಾಲವೇ ಅಳೆಯುವ 'ಮಾನ' ಅಥವಾ ಅಡಿಗೋಲು.

ಸೂರ್ಯನು ಆಕಾಶವನ್ನು ನಕ್ಷತ್ರಗಳ ಗುಂಪುಗಳ ದಾರಿಯಲ್ಲಿ ಒಂದು ಸಲ ಸುತ್ತುವುದಕ್ಕೆ 365 ದಿವಸ 6 ಗಂಟೆ 12 ನಿಮಿಷ ಸ್ಥೂಲವಾಗಿ ಬೇಕಾಗುವುದು. ಆದುದರಿಂದ ಈ ಕಾಲಕ್ಕೆ 'ಸಂವತ್ಸರ' ಅಥವಾ "ವರ್ಷ" ಎಂದು ಹೆಸರಿಟ್ಟರು. ಗಣಿತಕ್ಕೆ ಅನುಕೂಲ ಆಗಬೇಕು. ಇದರಿಂದ 365 ದಿನವನ್ನು ಪೂರ್ಣಾಂಕ ಮಾಡಿ 360 ಸಂಖ್ಯೆ "ಬೀಜ" ಎಂದರು. ಈ ವೃತ್ತವನ್ನು 360 ಭಾಗಮಾಡಿದರು. ಒಂದೊಂದು ಭಾಗವು ಭೂಮಧ್ಯರೇಖೆಗೆ ವೃತ್ತ ಕೇಂದ್ರದಲ್ಲಿ ಮಾಡುವ ಕೋಣವನ್ನು "ಡಿಗ್ರಿ" ಎಂದರು. ಈ ಕಾರಣ ವೃತ್ತದಲ್ಲಿ 360 ಡಿಗ್ರಿಗಳು.

ಆಕಾಶದಲ್ಲಿ ನಕ್ಷತ್ರಗಳ ಗುಂಪುಗಳು ವೃತ್ತಾಕಾರವಾಗಿ ಇದನ್ನು ಹೇಗೆ ಅಳೆಯುವುದು? 'ಗೋಳ ಗಣಿತ' ಇದಕ್ಕಾಗಿ ಉಪಯೋಗ.

ಈ 360 ಡಿಗ್ರಿಗಳನ್ನು ರವಿಯು 365 ದಿನ 6 ಗಂಟೆ 12 ನಿಮಿಷಗಳಲ್ಲಿ ಸುತ್ತುವನು. ಒಂದು ದಿನಕ್ಕೆ ಒಂದು ಡಿಗ್ರಿಗಿಂತ ಸ್ವಲ್ಪ ಕಡಿಮೆ ಸಂಚಾರಮಾಡುವನು. ಇದು ಆವನ ದೈನಂದಿನ ಗತಿ ಆಯಿತು.

ಇದರಿಂದ ಒಂದು ದಿನ ಒಂದು ಜಾಗದಲ್ಲಿದ್ದ ರವಿ ಮಾರನೆಯ ದಿನ ಅದೇ ಜಾಗದಲ್ಲಿ ಇರುವುದು ಅಸಾಧ್ಯ. ಇದರಿಂದ ಒಂದು ದಿನ ಇದ್ದಂತೆ ಮತ್ತೊಂದು ದಿನ ಇರದು.

## ರಾಶಿಗಳು–ಮಾಸಗಳು

ಈ ಸೂರ್ಯನಿಗೆ 12 ದಳಗಳು. ವೇದ ಪುರಾಣಗಳಲ್ಲಿ "ದ್ವಾದಶಾತ್ಮಾ ದಿವಾಕರಃ" ಅಂದರು. ಈ ಕಾರಣ ಆವನ ಕಾಲವೂ ಹನ್ನೆರಡು ಭಾಗಗಳು. ಈ ಭಾಗಕ್ಕೆ 'ತಿಂಗಳು', 'ಮಾಸ' ಎಂದರು. ಒಂದು ವರ್ಷಕ್ಕೆ 12 ಮಾಸಗಳು. ಈ ಒಂದು ಮಾಸಕ್ಕೆ ಮೂವತ್ತು ದಿನಗಳಾದವು. ಒಟ್ಟು 360 ದಿನಗಳು.

ಈ ರೀತಿ ಸೂರ್ಯನ ಗತಿಯಿಂದ ಕಾಲವು ಹುಟ್ಟಿಕೊಂಡಿತು.

ದಿನ, ತಿಂಗಳು, ವರ್ಷ ಇದು ಕಾಲದ ಮಾನ, ದಿನ ದಿನಕ್ಕೆ ವ್ಯತ್ಯಾಸ. ಇದನ್ನು ಗುರುತಿಸಲು ಗ್ರಹಗಳಿಗೆ ಒಂದು ಒಂದು ದಿನದಂತೆ ವಾರಗಳನ್ನು ಮಾಡಿದರು. ಈ ಕಾರಣಗಳಿಂದ ಸೂರ್ಯನು ಕಾಲದ ಮೂಲ ಕಾರಣವಾದನು. ಇವನು ಆದಿಯು. ಆದುದರಿಂದ ಆದಿತ್ಯನೆಂದರು. ಅದಿತಿಗೆ ಕಶ್ಯಪ ಬ್ರಹ್ಮನಿಂದ ಜನಿಸಿದ ಕಾರಣ ಆದಿತ್ಯ ಆದನು.

## ಉದಯ-ಅಸ್ತ

ಭೂಮಿಯು ಗುಂಡಾಗಿದೆ. ಈ ಭೂಗೋಳವನ್ನ ಅಳೆಯಲು 360 ಡಿಗ್ರಿಗಳು. ಪೂರ್ವ, ಪಶ್ಚಿಮವಾಗಿ ರೇಖೆಗಳನ್ನು ಎಳೆದು ಉತ್ತರಕ್ಕೆ ದಕ್ಷಿಣಕ್ಕೆ, ಡಿಗ್ರಿಗಳಾಗಿ ಅಳೆದರು. ಈ ರೇಖೆಗಳನ್ನು ಅಕ್ಷಾಂಶವೆಂದರು. ಉತ್ತರ ಮತ್ತು ದಕ್ಷಿಣ ಅಕ್ಷಾಂಶರೇಖೆಗಳಾದವು. ಉತ್ತರ ದಕ್ಷಿಣವಾಗಿ ರೇಖೆಗಳನ್ನು ಎಳೆದು ಪೂರ್ವ ಪಶ್ಚಿಮವಾಗಿ ಡಿಗ್ರಿಗಳನ್ನು ಅಳೆದರು. ಇದಕ್ಕೆ 'ರೇಖಾಂಶ'ವೆಂದರು. ಇವು ಪೂರ್ವ ರೇಖಾಂಶಗಳಾದವು. ಇವನ್ನು ಗ್ರೀನ್ವಿಚ್ ಎಂಬ ಸ್ಥಳದಿಂದ ಪೂರ್ವಪಶ್ಚಿಮವಾಗಿ ಅಳೆದರು.

ಭೂಮಿಯು ಪೂರ್ವ ಪಶ್ಚಿಮವಾಗಿ ತಿರುಗುತ್ತದೆ. ಸೂರ್ಯನು ಉತ್ತರ ದಕ್ಷಿಣ ಪಥಗಳಲ್ಲಿ ತಿರುಗುತ್ತಾನೆ.

ಭೂಮಿಯ ಒಂದು ರೇಖಾಂಶಕ್ಕೆ ಸಮನಾಗಿ ಸೂರ್ಯನು ಬಂದರೆ ಆ ರೇಖಾಂಶದಲ್ಲಿ 'ಆಗ ಬೆಳಗಾಯಿತು' ಅಂದರು. ಆಗ 'ಸೂರ್ಯ ಉದಯ' ಎಂದರು. ಭೂಮಿಯು ಪೂರ್ವಾಭಿಮುಖವಾಗಿ ತಿರುಗುತ್ತೆ. ಚಲನೆಯ ವೇಗ ಹೆಚ್ಚು. ಸೂರ್ಯನ ಚಲನೆ ಕಡಿಮೆ. ಇದರಿಂದ ಸೂರ್ಯನೇ ಪಶ್ಚಿಮಕ್ಕೆ ಚಲಿಸುವಂತೆ ತೋರುತ್ತದೆ. ಇದು ಕೇವಲ ಭ್ರಮೆ. ಚಲಿಸುವುದು ಭೂಮಿಯೇ. ಇದು ಎಲ್ಲರಗೂ ತಿಳಿದ ವಿಷಯ.

ಭೂಮಿ ಸುತ್ತುತ್ತಲೇ ಇತ್ತು. ಆಗ ಒಂದು ರೇಖಾಂಶದಲ್ಲಿ ಸೂರ್ಯ

ಉದಯವಾಗುತ್ತಲೇ ಇರುತ್ತದೆ. ಒಂದು ನಿರ್ದಿಷ್ಟಕಾಲದಲ್ಲಿ ಭೂಮಿಯ ಯಾವ ರೇಖಾಂಶ ಡಿಗ್ರಿಗೆ "ಲಗ್ನ-ಉದಯ ಲಗ್ನ-ಜನ್ಮ ಲಗ್ನ" ಎಂದು ಹೆಸರು.

ಯಾವುದೇ ರೇಖಾಂಶದಲ್ಲಿ ಸೂರ್ಯನ ಬೆಳಕು ಕಾಣದೆ ಹೋಗುವ ಕಾಲಕ್ಕೆ 'ಅಸ್ತ' ಕಾಲ ಎಂದರು. ಈ ರೀತಿ ಸೂರ್ಯನಿಗೆ ಉದಯ ಅಸ್ತಗಳು. ಬಂದುವು. ಉದಯ ಅಸ್ತಗಳು ಪರಸ್ಪರ ಅಭಿಮುಖ ರೇಖಾಂಶಗಳು. ಸೂರ್ಯನ ವರ್ಷದಲ್ಲಿ 12 ತಿಂಗಳು, ಹಾಗೆಯೇ 360 ಡಿಗ್ರಿಯ ಆಕಾಶವನ್ನು 12 ಭಾಗ ಮಾಡಿದರು. ಒಂದೊಂದು ಗುಂಪಿಗೆ "ರಾಶಿ" ಅಂದರು. ಒಂದು ತಿಂಗಳಿಗೆ 30 ದಿನಗಳಂತೆ ಈ ರಾಶಿಗೂ 30 ಡಿಗ್ರಿಗಳು.

ಒಟ್ಟು 27 ನಕ್ಷತ್ರಗಳಿದ್ದು ಹನ್ನೆರಡನೆಯ ಒಂದು ಭಾಗವಾದ ರಾಶಿಗೆ ಹಂಚಿದರು. ಒಂದೊಂದು ನಕ್ಷತ್ರಕ್ಕೆ 13 ಡಿಗ್ರಿ 30 ನಿಮಿಷಗಳಾದವು. ಲಗ್ನವು ಯಾವ ಡಿಗ್ರ ನಕ್ಷತ್ರದಲ್ಲಿ ಬರುತ್ತದೆಯೋ ಆರಾಶಿಯಹೇಸರನ್ನೇ ಆ ಲಗ್ನಕ್ಕೂ ಕೊಟ್ಟರು.

ಈ ಹನ್ನೆರಡು ರಾಶಿಗಳಿಗೆ ಹನ್ನೆರಡು ಹೆಸರುಗಳು ಪ್ರಸಿದ್ಧಿ ಆದವು. 1) ಮೇಷ, 2) ವೃಷಭ, 3) ಮಿಥುನ , 4) ಕಟಕ, 5) ಸಿಂಹ, 6) ಕನ್ಯಾ, 7) ತುಲಾ, 8) ವೃಶ್ಚಿಕ, 9) ಧನು, 10) ಮಕರ, 11) ಕುಂಭ, 12) ಮೀನ, ಒಂದು ರಾಶಿಯಲ್ಲಿ ಲಗ್ನವಿದೆ. ಆ ರಾಶಿಯ ಹೆಸರೇ ಆ ಲಗ್ನದ ಹೆಸರು. ಮೇಷ ಲಗ್ನ, ವೃಷಭ ಲಗ್ನ ಇತ್ಯಾದಿ.

## ರಾಶಿಗಳು ಮತ್ತು ರಾಶಿನಾಥರಾದ ಗ್ರಹಗಳು

ರಾಶಿಗಳು ಹನ್ನೆರಡು. ಗ್ರಹಗಳು ಒಂಭತ್ತು. ಈ ಹನ್ನೆರಡು ರಾಶಿಗಳನ್ನು ಗ್ರಹಗಳಿಗೆ ಹಂಚಿದರು.

ಮೇಷಕ್ಕೆ ಕುಜ, ವೃಷಭಕ್ಕೆ ಶುಕ್ರ, ಮಿಥುನಕ್ಕೆ ಬುಧ, ಕಟಕಕ್ಕೆ ಚಂದ್ರ, ಸಿಂಹಕ್ಕೆ ರವಿ, ಕನ್ನೆಗೆ ಬುಧ, ತುಲಾ ರಾಶಿಗೆ ಶುಕ್ರ, ವೃಶ್ಚಿಕಕ್ಕೆ ಕುಜ, ಧನುಸ್ಸಿಗೆ

ಗುರು, ಮಕರ–ಕುಂಭ ರಾಶಿಗೆ ಶನಿ, ಮೀನಕ್ಕೆ ಗುರು. ಇದು ಹಂಚಿಕೆಯ ಕ್ರಮ.

ಆಯಾ ರಾಶಿಗೆ ಆಯಾ ಗ್ರಹವು ಅಧಿಪತಿ ಆಯಿತು. ಆ ಗ್ರಹದ ಗುಣ ಸ್ವಭಾವ ಶೀಲಗಳೇ ಆಯಾ ರಾಶಿಗಳ ಗುಣಶೀಲಗಳು. ರಾಶಿ ಲಗ್ನ ಎರಡರ ಗುಣ ಶೀಲಗಳೂ ಒಂದೇ ಆದವು. ಲಗ್ನ ಯಾವ ರಾಶಿ ? ಆ ರಾಶಿನಾಥನೇ ಲಗ್ನಕ್ಕೂ ನಾಥನು, ಇವನೇ "ಲಗ್ನಾಧಿಪತಿ" ಅಂದರು.

ರಾಶಿಗಳು ಹನ್ನೆರಡು. ನಕ್ಷತ್ರಗಳು ಇಪ್ಪತ್ತೇಳು. ಇದರಿಂದ 2 ¼ ನಕ್ಷತ್ರಕ್ಕೆ ಒಂದು ರಾಶಿ ಆಯಿತು . ನಕ್ಷತ್ರ ನಾಲ್ಕು ಭಾಗ, ಆ ಭಾಗವನ್ನು ಪಾದ ಎಂದರು. ರಾಶಿಗೆ ಒಂಬತ್ತು ಪಾದಗಳು ಆದವು. ರಾಶಿಯನ್ನೇ ಭಾಗ ಮಾಡಿದರು. ಒಂದೊಂದು ಭಾಗಕ್ಕೆ ಒಂದೊಂದು 'ಪಾದ' ಎಂದರು. ಈ ಒಂಭತ್ತನೆಯ ಪಾದವನ್ನು "ನವಾಂಶ" ಎಂದರು. 'ನವಾಂಶ' ಎಂದರೆ ಒಂಭತ್ತನೆಯ ಒಂದು ಭಾಗ. ಹನ್ನೆರಡು ರಾಶಿಗಳಿಗೆ 108 ಪಾದಗಳು ಆದವು.

ಅಶ್ವಿನೀ ನಕ್ಷತ್ರ ಒಂದನೆಯ ಪಾದ ' ಮೇಷಾಂಶ '..... ಹಿಡಿದು ರೇವತೀ ನಕ್ಷತ್ರ ನಾಲ್ಕನೆಯ ಪಾದ ಮೀನಾಂಶದವರೆಗೂ 108 ಪಾದಗಳಾಗಿ ರಾಶಿಗಳ ಕ್ರಮದಂತೆಯೇ ಎಣಿಸಿದರು.

ಲಗ್ನಕ್ಕೆ ಅಧಿಪತಿ ಆದಂತೆ ಈ ನವಾಂಶ ರಾಶಿಯಧಿಪತಿ ಗ್ರಹವೇ ಈ ಅಂಶಕ್ಕೂ ಅಧಿಪತಿ ಆದನು. ಮೇಷ ರಾಶಿಗೆ ಕುಜ ಅಧಿಪತಿ, ಅಂಶಕ್ಕೂ ಆವನೇ ಅಧಿಪತಿ, ಇತ್ಯಾದಿ.

ಈ ಅಂಶನಾಥನ ಗುಣ ಸ್ವಭಾವ ಲಗ್ನ – ಲಗ್ನನಾಯಕನ ಸ್ವಭಾವ. ಉದಾರತರಣೆಗೆ ರವಿಯ ಗುಣಗಳು. ಈ ರವಿ ಅಂಶದಲ್ಲಿ ಹುಟ್ಟಿದವರಿಗೆ ಈ ಗುಣಗಳ ಸಮನ್ವಯ. ಈ ರವಿಯು [illegible] ರಾಶಿಗೆ ಅಧಿಪತಿ. ಇದರ ಅರ್ಥ ಪ್ರ[illegible]ಯೊಂದು ಲಗ್ನದಲ್ಲಿಯೂ [illegible]ಂಶವು ರವಿಯ ಅಂಶವಾಯಿತು. ಈ ಸಿಂಹ ನವಾಂಶದಲ್ಲಿ ಹುಟ್ಟಿದ ಜನಗಳ ಗುಣಗಳು ರವಿಗ್ರಹದ ಗುಣಗಳನ್ನು ಅನುಸರಿಸುವುವು. ಹೀಗೆ ಕಟಕ ನವಾಂಶ ಚಂದ್ರನ ತರಹ ಗುಣಗಳು ಇತ್ಯಾದಿ.

## ಕಲೆ ವಿಕಲೆ

360 ಡಿಗ್ರಿಗಳ ಆಕಾಶವನ್ನು ಸುತ್ತಲು ಸೂರ್ಯನಿಗೆ ಒಂದು ವರ್ಷ. ಒಂದು ದಿಲಕ್ಕೆ ಸ್ಥೂಲವಾಗಿ ಒಂದು ಡಿಗ್ರಿಯಷ್ಟು ಆಯಿತು.

ಈ ಒಂದು ಡಿಗ್ರಿಯನ್ನು 60 ಭಾಗಗಳಾಗಿ ಮಾಡಿದರು. ಈ ಒಂದು ಭಾಗಕ್ಕೆ "ನಿಮಿಷ" ಅಂದರು. ಒಂದು ನಿಮಿಷವನ್ನು 60 ಭಾಗಗಳಾಗು ಒಡೆದು ಅದನ್ನು ಸೆಕೆಂಡುಗಳು ಅಂದರು.

ಅದೇ ರೀತಿಯಾಗಿ ಡಿಗ್ರಿಗೆ ಸಮನಾದ ದಿವಸವನ್ನು 60 ಭಾಗಗಳಾಗಿ ಮಾಡಿ ಘಳಿಗೆ ಅಂದರು. ಒಂದು ಘಳಿಗೆಗಳನ್ನು 60 ಭಾಗ ಮಾಡಿ ವಿಘಳಿಗೆ ಅಂದರು. ಘಟಿಗೆಗಳನ್ನು ಅಳೆಯುವ ಯಂತ್ರಕ್ಕೆ "ಘಟೀಯಂತ್ರ" ಅಥವಾ ಗಡಿಯಾರ ಅಂದರು.

360 ಡಿಗ್ರಿಯ ಆಕಾಶವನ್ನು ಸುತ್ತಲು ಸೂರ್ಯನಿಗೆ ಒಂದು ವರ್ಷ ಬೇಕು. ಒಂದು ಡಿಗ್ರಿಗೆ 60 ಕಲೆ ಅಥವಾ ನಿಮಿಷ, ಒಂದು ಕಲೆಗೆ 60 ವಿಕಲೆ ಅಥವಾ ಸೆಕೆಂಡ್ಸ್ 360 ಡಿಗ್ರಿಗೆ 21,600 ಕಲೆಗಳನ್ನು ದಿನಕ್ಕೆ ಹಂಚಿದರೆ 21,600 ಸಲ ಸೂರ್ಯನು ಉಸಿರಾಡುತ್ತಾನೆ.

ಇದು ಕೇವಲ ಕಲ್ಪನೆ. ಉಸಿಗಾಡುವುದು ನಾವು. ಅಳೆಯುವುದಕ್ಕೆ ಅವನ ಕಾಲಮಾನ. ಒಂದು ಸಲ ಉಸಿರು ಒಳಗೆ ತೆಗೆದುಕೊಳ್ಳುವುದು, ಒಂದು ಸಲ ಒಳಗೆ ತಡೆದಿಡುವುದು, ಒಂದು ಸಲ ಹೊರಗೆ ಬಿಡುವುದು, ಮೂರೂ ಸೇರಿ ಕಲೆಗಳ ಕಾಲ ಬೇಕಾಗುವುದು. ಈ ಮೂರೂ ಸೇರಿ ಒಂದು ಸಲ ಉಶ್ವಾಸ ನಿಶ್ವಾಸವಾಗಿ ಒಂದು ಮಾನವಾಯಿತು. 'ಮಾನ' ಅಂದರೆ ಅಳತೆಯ ಕಡ್ಡಿ. ಮೂರು ಕಲೆಗಳಿಗೆ ಒಂದು ಸಲದಂತೆ 21,600 ಕಲೆಗಳಲ್ಲಿ 7,200 ಸಲ ಉಸಿರುಗಳಾದವು. ಪ್ರಾಣಿಗಳು ಮನುಷ್ಯರು ಎಲ್ಲವೂ 7,200 ಸಲ ಉಸಿರಾಡುತ್ತಾರೆ. ಯೋಗಶಾಸ್ತ್ರದಲ್ಲಿ ಪೂರಕ' ಎಂಗ[illegible] ತೆಗೆದುಕೊಳ್ಳುವುದು. "ಕುಂಭಕ" ಎಂದರೆ ತಡೆ[illegible]

ರೇಚಕ ಎಂದರೆ ಉಸಿರು ಹೊರಗೆ ಬಿಡುವುದು. ಪೂರಕ–ಕಂಭಕ–ರೇಚಕ ಕಾರ್ಯಕ್ರಮಕ್ಕೆ ಪ್ರಾಣಾಯಾಮ ಎಂದರು.

ಉಸಿರು ಎಳೆದುಕೋಳ್ಳುವಾಗ "ಸ" ಕಾರ ಶಬ್ದ ಮಾಡುವುದು. ಬಿಡುವಾಗ "ಹ" ಕಾರ ಶಬ್ದ ಮಾಡುವುದು. ಉಸಿರಾಡುವಾಗ 'ಸೋಹಂ' 'ಹಂಸ' ಎಂಬ ಮಂತ್ರ ಆಗುತ್ತೆ. ಜೀವನು ದೇಹದೊಳಗೆ ಪರಮಾತ್ಮನನ್ನು 'ಹಂಸ' ಮಂತ್ರದಿಂದ ಜಪಿಸುತ್ತಾನೆ. ಈ ಜಪದಿಂದ ಪರಮಾತ್ಮನ ಜ್ಞಾನ ಆಗುತ್ತೆ. ಈ ರೀತಿ ಪ್ರತಿ ಉಸಿರಿನಲ್ಲಿಯೂ ಅವನದೇ ಧ್ಯಾನ. ಈ ರೀತಿಯ ಯೋಗಿಗಳಿಗೆ 'ಪರಮ ಹಂಸ' ಎಂದರು. ಯೋಗಿ ರಾಮ ಕೃಷ್ಣರಿಗೆ 'ರಾಮ ಕೃಷ್ಣ ಪರಮಹಂಸ' ಎಂದರು.

---

# 3

## ಜನನ – ಜೀವನ – ಮರಣ.

'ಮಗು ಹುಟ್ಟಿತು' ಅನ್ನುವುದು ಯಾವಾಗ ? ಪ್ರಥಮ ಬಾರಿ ಅಳುವಾಗ. ಈಮಗು ಅಳುವ ಶಬ್ದ ಕೇಳಿದರೆ ಮಾತ್ರ 'ಹುಟ್ಟಿತು' ಎನ್ನುತ್ತಾರೆ. ಮಗು ಉಸಿರೇ ಆಡದೆ ಅಳುವುದು ಹೇಗೆ? ಉಸಿರಾಡದೆ ಇದ್ದರೆ, ಹುಟ್ಟಿದ ಮಗು 'ಸತ್ತು ಹುಟ್ಟಿತು' ಅಥವ "ಮೃತ ಪ್ರಸೂತಿ" ಅನ್ನುತ್ತಾರೆ. ಮಗು ಉಸಿರಾಡಿದ ಚಿಹ್ನೆ, ಆದರ "ಅಳು". ಈ ಉಸಿರಾಟ ಮಗುವಿಗೆ ಪ್ರಾರಂಭವಾದರೆ ಆಗ ಆದರ ಜನನ ಉಸಿರಾಡುವಷ್ಟು ಕಾಲವನ್ನು 'ಜೀವನ' ಎಂದರು. ಉಸಿರಾಡುವುದು ನಿಂತ ಕ್ಷಣ 'ಮರಣ' ಆಗುತ್ತೆ.

### ಪ್ರಾಣ – ಜೀವನಾಡಿ

ಈ ಜೀವನದ ಮೂಲ ಉಸಿರಿಗೆ 'ಪ್ರಾಣ' ಅಂದರು. ಈ ಪ್ರಾಣವನ್ನು 'ಅಸು' ಅಂದರು. ಈ ಪ್ರಾಣವು ಸೂರ್ಯನ 21,600 ಪ್ರಾಣಗಳಿಂದಲೇ ಬರಬೇಕು. 7,200 ಪ್ರಾಣಾಯಾಮಗಳನ್ನು ಹೊಂದಬೇಕು. ಈ 7,200 ಪ್ರಾಣಗಳಲ್ಲಿ ಒಂದು ಪ್ರಾಣ ಬಂದು ಸೇರುತ್ತೆ . 7,200 ಪ್ರಾಣಗಳು ಜೀವವನ್ನುಕೊಡುತ್ತವೆ. ಅವಕ್ಕೆ ಈ ಪ್ರಾಣಕ್ಕೆ "ಜೀವ"ಅಂದರು. ಈ ಪ್ರಾಣಕ್ಕೆ 'ನಾಡಿ' ಎಂದೂ ಕರೆವರು. ಜೀವನಕ್ಕೆ ಜವಾಬ್ದಾರಿ ಹೊಂದಿದ ಕಾರಣ "ಜೀವನಾಡಿ" ಅಂದರು.

7,200 ಪ್ರಾಣಗಳಲ್ಲಿ ಎಲ್ಲರೂ ಉಸಿರಾಡುವರು. ದೇಹ ಬಂದ ತಕ್ಷಣ ಮೊದಲಿನ 'ನಾಡಿ'ಗೆ 'ಜೀವನಾಡಿ' ಅಂದರು. ಒಂದೊಂದು 'ನಾಡಿ'ಯಲ್ಲಿ ಜನಿಸಿದ ಶಿಶುವಿನ ಜೀವನ ಎಂದಹುದು? ಯಾವ ರೀತಿ ಜೀವನವು ಅವನಿಗಾಗಿ ಕಾದಿದೆ? ಮರಣ ಎಂತಹುದು? ಎಲ್ಲಿ ? ಹೇಗೆ ? ಎಂದು ಯೋಗಿಗಳಾದವರು ವಿವರಿಸಿ ಗ್ರಂಥಗಳನ್ನು ಬರೆದರು. ಆಕಾಶದ 360 ಡಿಗ್ರಿಗಳನ್ನೇ ಮೂಲ ಅಂಕವಾಗಿಟ್ಟುಕೊಂಡು ಈ ನಾಡೀ ಶಾಸ್ತ್ರಗಳಲ್ಲಿ ಜೀವನ ಚರಿತ್ರೆಯನ್ನು ಬರೆದರು. ಈ ಗ್ರಂಥಕ್ಕೆ 'ನಾಡೀಶಾಸ್ತ್ರ' ಅಂದರು. ಜ್ಯೋತಿಷ್ಯಕ್ಕೆ 'ನಾಡೀಶಾಸ್ತ್ರ' ಎಂದೂ ಹೆಸರು ಪ್ರಸಿದ್ಧವಾಯಿತು.

## ಆಯುಷ್ಯ – ರಾಶಿಚಕ್ರ

ಮನುಷ್ಯನ ಆಯುಷ್ಯ ಪರಿಮಿತಿಯನ್ನು ಅವನು ಉಸಿರಾಡುವ ಅತಿ ಹೆಚ್ಚಿನ ಸಂಖ್ಯೆಯಿಂದ ಎಣಿಸುತ್ತಾರೆ. ಒಂದು ದಿನಕ್ಕೆ 7,200 ಬಾರಿ ಉಸಿರಾಡುವುದು ಸಾಮಾನ್ಯ. ಈ ಮೂಲ ತತ್ವದಮೇಲೆ ಆಯುಷ್ಯ ವರುಷಗಳನ್ನು ಅಳೆದರು. ದಿನ ಒಂದಕ್ಕೆ ಉಸಿರಾಡುವ ಸಂಖ್ಯೆಯನ್ನು ಕಮ್ಮಿ ಮಾಡುವ ಕ್ರಮಕ್ಕೆ 'ಪ್ರಾಣಾಯಾಮ', "ಯೋಗ" ಅಂದರು. ಹದಿನಾರು ವರುಷಗಳ ಆಯುಃ ಪರಿಮಿತಿ ಇದ್ದ ಶ್ರೀ ಶಂಕರಭಗವತ್ಪಾದ ಶ್ರೀಗಳು ಇನ್ನು ಹದಿನಾರು ವರುಷಗಳು ಈ ಪ್ರಾಣಾಯಾಮ ಯೋಗದಿಂದ ಹೆಚ್ಚಿಸಿಕೊಂಡರಂತೆ !

ಜನಗಳ ಆಯುಷ್ಯವನ್ನು ಮೂಲ ಅಂಕವಾದ 360 ಡಿಗ್ರಿಗೆ ಸಮಮಾಡಿ 360 ವರುಷಗಳು ಅಂದರು. ಈ 360 ವರುಷಗಳನ್ನು ಪೂರ್ವ ಜನ್ಮ, ಇಂದಿನ ಜನ್ಮ, ಮುಂದಿನ ಜನ್ಮವೆಂದು ಮೂರು ಭಾಗ ಮಾಡಿ ಈ ವರ್ತಮಾನ ಜನ್ಮಕ್ಕೆ 120 ವರುಷಗಳಾಯಿತು. ಈ 120 ವರುಷಗಳನ್ನು ಆಯಾ ಜನ್ಮದ 'ಪರಮಾಯು'ಅಂದರು. ಅಥವಾ 'ಪೂರ್ಣಾಯು' ಅಂದರು.

ಈ ಪರಿಮಿತಿಗೆ ಮೊದಲು ಸಾವು ಇದ್ದರೆ 'ಅಪಮೃತ್ಯು'. ಈ ಪರಿಮಿತಯನ್ನು ದಾಟಿದರೆ 'ಅತೀತಾಯು' ಅಥವಾ ಅಮಿತಾಯ ಅಂದರು.

ಈ ಪೂರ್ಣ ಆಯು ಪರಿಮಿತಿಯನ್ನು ಮೂರು ಭಾಗಮಾಡಿ ಆಯಾ ಭಾಗಗಳಲ್ಲಿ ಸಾವು ಬಂದರೆ 1) ಅಲ್ಪಾಯು, 2) ಮಧ್ಯಾಯು, 3) ಪೂರ್ಣಾಯು, ಅಂದರು.

ಪೂರ್ಣಾಯು 120 ವರುಷಗಳಲ್ಲಿ ಜೀವನದ ಪ್ರತಿ ವರುಷ ಹೇಗೆ ಮತ್ತೊಂದು ವರುಷದಿಂದ ಬೇರೆ ಆಗಿದೆ ? ಇವುಗಳಿಗಿರುವ ಪರಸ್ಪರ ವ್ಯತ್ಯಾಸವೇನು? ಇದನ್ನು ತಿಳಿಯುವುದಕ್ಕೆ ಈ ಆಯುಷ್ಯ ಕಾಲವನ್ನು ಅಳೆಯಲು ಒಂದು 'ಅಡಿಕೋಲು' ಅವಶ್ಯವಾಯಿತು.

## ಕಾಲಚಕ್ರ

ಅಶ್ವಿನೀ ನಕ್ಷತ್ರ ಮೊದಲಾಗಿ ರೇವತೀ ನಕ್ಷತ್ರದವರೆಗೆ ಈ 'ನಭೋಮಂಡಲ'. ಈ ಮಂಡಲದಲ್ಲಿ ಮೇಷಾದಿ ಮೀನಾಂತ್ಯ ಹನ್ನೆರಡು ರಾಶಿಗಳಾದವು.

ಈ ಪೂರ್ಣಾಯು 120 ವರುಷಗಳನ್ನು ಹನ್ನೆರಡು ರಾಶಿಗಳಿಗೆ ಹಂಚಿದರು. ಆಗ ಒಂದೊಂದು ರಾಶಿಗೆ 10 ವರುಷಗಳಾದವು. ಒಂದೊಂದು ರಾಶಿಗೆ ಒಂಬತ್ತು ಪಾದಗಳನ್ನು ಮಾಡಿ ಒಂದೊಂದು ನವಾಂಶಕ್ಕೆ ಒಂದು ಒಂದು ವರುಷದಂತೆ 9 ವರುಷಗಳನ್ನು ಕೊಟ್ಟರು. ಪ್ರತಿ ಹತ್ತನೆಯ ವರುಷವನ್ನು ಪೂರ್ಣಂಕ ವರುಷ ಅಂದರು. ಅದಕ್ಕೆ ಫಲವನ್ನು ದೇವರಿಗೆ ಕೊಟ್ಟು ಪೂರ್ಣತ್ವವನ್ನು ಪಡೆದರು. ಈ ವರುಷಕ್ಕೆ ಫಲ ಒಂಬತ್ತು ವರುಷಗಳ ಸಮಗ್ರ ಸೂಚಕ.

ಹೀಗೆ ಅಶ್ವಿನ್ಯಾದಿಯಾಗಿ ಪ್ರತಿ ನಕ್ಷತ್ರಕ್ಕೆ ನಾಲ್ಕು ವರುಷಗಳು. ಈ ರೀತಿ ಆಕಾಶದಲ್ಲಿರುವ ನಕ್ಷತ್ರ ವೃತ್ತದಿಂದ 'ಚಕ್ರ' ರೂಪವಾಗಿ ಅಳೆಯುವ ಕಾಲ ಮಿತಿಗೆ 'ಕಾಲಚಕ್ರ' ಎಂದು ಕರೆದರು.

ಈ "ಕಾಲಚಕ್ರ"ವನ್ನೇ ಮಹಾವಿಷ್ಣುವು ಹಿಡಿದಿರುವ "ಸುದರ್ಶನ" ಚಕ್ರವೆಂದರು.

## ಚಕ್ರಕ್ರಮ

ಪೂರ್ಣಾಯು 120 ವರುಷಗಳನ್ನು ರಾಶಿ ಒಂದಕ್ಕೆ ಹತ್ತು ವರುಷಗಳಂತೆ ಹಂಚಿದರು. ಪೂರ್ವಾರ್ಧ, ಉತ್ತರಾರ್ಧ ಎಂದು ಅಶ್ವಿನೀ ನಕ್ಷತ್ರಗಳಿಂದ ಕೂಡಿದ ಆಕಾಶ ಚಕ್ರವನ್ನು ಎರಡು ಭಾಗ ಮಾಡಿದರು.

ಮೇಷಾದಿ ಯಾವುದೇ ರಾಶಿಯಲ್ಲಿನ ಗ್ರಹ ಯಾವ ವರುಷದಲ್ಲಿ ಫಲವನ್ನು ಕೊಡುವುದು ಎಂದು ಆ ರಾಶಿಯ ಪಾದ ವರುಷದಿಂದ ತಿಳಿಯಲು ಅನುಕೂಲವಾಯಿತು. ಎಣಿಸುವಾಗ ಮನುಷ್ಯನ ಜನ್ಮ ಕಾಲದಿಂದ ವರುಷಗಳನ್ನು ಎಣಿಸಿ ಫಲವನ್ನು "ನಾಡಿ"ಗಳಲ್ಲಿ ಬರೆದರು.

ಉತ್ತರಾರ್ಧಕ್ಕೆ ತುಲಾ ರಾಶಿ ಆದಿಯಾಗಿ ಮೀನದವರೆಗೆ 60 ವರುಷಗಳನ್ನು ಹಂಚಿದರು. ಈ ಕ್ರಮದಲ್ಲಿಯೂ ಗ್ರಹಗಳ ಫಲವನ್ನು ಅದರ ಕಾಲವನ್ನು ಬರೆದರು. ರಾಶಿ ಪಾದವನ್ನು ಹಿಡಿದು ವರ್ಷಕ್ಕೆ ಫಲ ಬರೆದರು.

ಮೇಷಾದಿ ವರ್ಷಗಳನ್ನು ಎಣಿಸುವಾಗ ಜನ್ಮ ವರಷದಿಂದ ಎಣಿಸಿದರು. ತುಲಾದಿ ವರುಷಗಳನ್ನು ಪ್ರಭವಾದಿ ಅಕ್ಷಯ ವರುಷಗಳವರೆಗೆ 60 ವರ್ಷಗಳನ್ನು ಎಣಿಸಿದರು. ಈ ಚಕ್ರದಲ್ಲಿ ಫಲ ಹೇಳುವುದಕ್ಕೆ ಪಂಚಾಂಗ ವರ್ಷಗಳನ್ನು ಬಳಸಿದರು. ಆದುದರಿಂದ ಇದಕ್ಕೆ " ಪ್ರಶ್ನ ಶಾಸ್ತ್ರ " ಅಂದರು. ಈ ತುಲಾದಿ ಅರ್ಧಕ್ಕೆ "ಪ್ರಶ್ನೆಚಕ್ರ" ಅಂದರು.

ಪೂರ್ವಾರ್ಧಕ್ಕೆ "ಸವ್ಯ ಚಕ್ರ" ಎಂದೂ ಉತ್ತರಾರ್ಧಕ್ಕೆ "ಅಪಸವ್ಯಚಕ್ರ" ಎಂದೂ ಹೆಸರಿಟ್ಟರು.

ಈ ಚಕ್ರ ಕ್ರಮವನ್ನು "ನಾಡೀ ಶಾಸ್ತ್ರ"ಗಳಲ್ಲಿ ವರ್ಷ ಫಲ ನಿರ್ಣಯಿಸಲು ಉಪಯೋಗಿಸಿದರು.

## ಸಂಕ್ರಮಣ

" ಕ್ರಮಣ " ಅಂದರೆ, "ದಾಟುವುದು". ಆಂಜನೇಯನು ಸಮುದ್ರವನ್ನು

ದಾಟಿದನು. ಆವನಿಗೆ "ಉದಧಿ ಕ್ರಮಣ " ಎಂದು ಹೆಸರಾಯಿತು. ಹಾಗೆಯೇ ಒಂದು ರಾಶಿಯಿಂದ ಒಂದು ರಾಶಿಗೆ ಸೂರ್ಯನು ದಾಟುತ್ತಾನೆ. ಈ ರಾಶಿ ಪ್ರವೇಶ ಕಾಲಕ್ಕೆ "ಸಂಕ್ರಮಣ" ಎಂದು ಹೆಸರು. ಯಾವ ರಾಶಿಯನ್ನು ಪ್ರವೇಶಿಸುತ್ತಾನೆ ಅದೇ ರಾಶಿಯ ಹೆಸರನ್ನು ಸಂಕ್ರಮಣಕ್ಕೆ ಕೊಟ್ಟರು. "ಮೇಷ ಸಂಕ್ರಮಣ ", "ವೃಷಭ ಸಂಕ್ರಮಣ"... ಇತ್ಯಾದಿ, ಇದನ್ನು "ಪರ್ವ ಕಾಲ" ಎಂದು ಕರೆದರು. ಎರಡು ರಾಶಿಗಳ ಸಂದಿಗೆ " ಪರ್ವ " ಎಂದು ಹೆಸರು. ಈ ಕಾಲದಲ್ಲಿ ಶ್ರಾದ್ಧ, ತರ್ಪಣ, ಜಪ, ತಪಾದಿಗಳನ್ನು ಮಾಡಿದರು. ಪಾಪ ಸವೆಯಲು ದಾನ ಮಾಡ ಬೇಕು ಅಂದರು.

---

# 4

## ಸೂರ್ಯ ಸಿದ್ಧಾಂತ

ಕಾಲವನ್ನು ಅಳೆಯಲು ಸಾಧ್ಯವೇ ? ಕಾಲವು ಕೈಗೆ ಸಿಕ್ಕುವ ಪದಾರ್ಥವೇ ? ಇದನ್ನು ಅಳೆಯುವ ಸಾಮರ್ಥ್ಯ ಹೇಗೆ ಬಂದಿತು ?

ಬುದ್ಧಿ ಒಂದು ಶಕ್ತಿ. ಇದನ್ನು ದೇವರು ಅನುಗ್ರಹ ಮಾಡಿದ್ದಾನೆ. ಈ ಬುದ್ಧಿ ಶಕ್ತಿ ಯಿಂದ ಮಾನವನು ಕಾಲವನ್ನು ಗುರುತಿಸುತ್ತಾನೆ. ಎಲ್ಲರಿಗೂ ಕಾಣುವ ಸೂರ್ಯನನ್ನೇ ಹಿಡಿದು ಬುದ್ಧಿಶಕ್ತಿಯು ಕಾಲವನ್ನು ಅಳತೆ ಹಾಕಿತು.

ಹರಿಯುತ್ತಿರುವ ನದಿಗೆ ಸೇತುವೆ ಹಾಕಿದೆ. ಆ ಸೇತುವೆ ಮೇಲೆ ನಿಂತು ಕೆಳಗಡೆ ನೋಡಿ. ಆಗ ನದಿ ನಿಂತು ನಾವೇ ಓಡುತ್ತಿರುವಂತೆ ಕಾಣುತ್ತದೆ. ಇದು ನೋಟದ ಒಂದು ಭ್ರಮೆ. ಅದೇ ರೀತಿ ಸೂರ್ಯನೂ ಪೂರ್ವದಿಂದ ಪಶ್ಚಿಮಕ್ಕೆ ಪ್ರಯಾಣ ಮಾಡಿದಂತೆ ಕಾಣುವುದು. ಆಗ ರವಿಯು ಅರ್ಧ ವೃತ್ತಾಕಾರದಲ್ಲಿ ಚಲಿಸಿದಂತೆ ತೋರುವುದು ಆಕಾಶದಲ್ಲಿ ಸೂರ್ಯನು ಕಮಾನಿನಂತೆ ಚಲಿಸುವಂತೆ ಕಾಣುವುದು. ಅವನ ಬೆಳಕಿಗೆ ಅಡ್ಡವಾಗಿ ಪದಾರ್ಥ ಇದ್ದರೆ, ಆ ಪದಾರ್ಥದ ನೆರಳು ಭೂಮಿಯ ಮೇಲೆ ಬೀಳುವುದು. ಈ ಪದಾರ್ಥದ ನೆರಳು ಅಥವ ಛಾಯೆಯು ಉದಯ ಕಾಲದಲ್ಲಿ ಉದ್ದವಾಗಿ

ಬೀಳುವುದು. ಸೂರ್ಯನು ನೆತ್ತಿಯ ಮೇಲೆ ಬಂದಾಗ ಈ ಛಾಯೆಯು ಅತಿ ಕಡಿಮೆ. ಪುನಃ ಸೂರ್ಯನು ಪಶ್ಚಿಮದ ಕಡೆಗೆ ಹೋಗುತ್ತಾ ಈ ನೆರಳು ಪೂರ್ವದ ಕಡೆಗೆ ಬೆಳೆಯುತ್ತಾ ಹೋಗುವುದು. ಹೀಗೆ ಸೂರ್ಯನ ಸಂಚಾರಕ್ಕೆ ಹೋಲುವಂತೆ ಈ ನೆರಳು ಬೆಳೆಯುತ್ತಾ ಕುಂದುತ್ತಾ ಹೋಗುವುದು. ಈ ನೆರಳಿನ "ಸಂಪಾತ" ಲೆಕ್ಕದಿಂದ ಉದಯ ಕಾಲದಿಂದ ಎಷ್ಟು ಹೊತ್ತು ಕಳೆದಿದೆ ಎಂದು ಪೂರ್ವಿಕರು ತಿಳಿಯುತ್ತಿದ್ದರು.

ಕಾಲ ಮುಂದುವರೆಯಿತು. ಇನ್ನೂ ಖಚಿತವಾಗಿ ಕಾಲವನ್ನು ತಿಳಿಯುವ ಸಾಧನೆಗಳನ್ನು ಕಂಡುಹಿಡಿದರು. ಹಿಂದಿನ ಕಾಲದಲ್ಲಿ ಗಣಿತಜ್ಞರು ಕೇವಲ ಒಂದು ಅಡಿಕೋಲಿನ ನೆರಳಿನ ಅಳತೆಯಿಂದ ಕಾಲವನ್ನು ಕಂಡುಹಿಡಿಯುತ್ತಿದ್ದರು.

ಉದಾಹರಣೆಗೆ.

"ವರ್ಷದಲ್ಲಿ ಅಧಿಕತಮ ದಿನದ ಘಟಿಕಾ ಪ್ರಮಾಣದಲ್ಲಿ ಅಂದಿನ ದಿನದ ಘಟಿಕಾ ಪ್ರಮಾಣವನ್ನು ಕಳೆದು ಶೇಷವನ್ನು 16 ಭಾಗ ಮಾಡಿ ಒಂದ ಭಾಗವನ್ನು ಮಾತ್ರ 1 ಘಳಿಗೆಯಲ್ಲಿ ಕಳೆದು ಅದರ $^1/_8$ ಭಾಗವನ್ನು ತೆಗೆದು ಅದಕ್ಕೆ ಕೋಲಿನ (12" ಪರಿಮಿತ) ನೆರಳಿನ 1/12 ಭಾಗವನ್ನು ಸೇರಿಸಬೇಕು. ಅಂದಿನ ದಿನ ಪ್ರಮಾಣ ಘಟಿಕೆಗಳಲ್ಲಿ ಅರ್ಧವನ್ನು ತೆಗೆದು ಅದನ್ನು ಈ ಮೇಲೆ ಹೇಳಿದ ಮೊತ್ತದಿಂದ ಭಾಗಿಸಿದರೆ ಶೇಷವು ಸೂರ್ಯ ಉದಯಾದಿ ಘಟಿಕೆಗಳನ್ನು ನಿರ್ಧಿಷ್ಟ ಕಾಲಕ್ಕೆ ತೋರಿಸುವುದು."

ಶ್ರೀ ರಾಮ ದಯಾಳುವೆಂಬ ಜ್ಯೋತಿಷ್ಯನು ತನ್ನ "ಸಂಕೇತನಿಧಿ" ಎಂಬ ಗ್ರಂಥದಲ್ಲಿ ಹುಟ್ಟಿದ ಸಮಯಕ್ಕೆ ಉದಯಾದಿ ಎಷ್ಟು ಕಾಲ ಕಳೆಯಿತು ಎಂದು ನೆರಳಿನ ಅಳತೆಯಿಂದ ಕಂಡು ಹಿಡಿಯುವ ಗಣಿತ ತಂತ್ರವನ್ನು ಉದಾಹರಿಸಿದ್ದಾನೆ.

ಈ ರೀತಿ ಸೂರ್ಯನು ಎಲ್ಲ ವಿಷಯಗಳಿಗೂ ಪ್ರಮುಖ ಶಕ್ತಿ ಕೇಂದ್ರ, ಆದುದರಿಂದ ಅವನಲ್ಲಿ ಎಲ್ಲರಿಗೂ ದೈವೀಕ ಮನೋಭಾವ. ವರಾಹ

ಮಿಹಿರಾಚಾರ್ಯರೂ ಸೂರ್ಯನನ್ನು ಕುರಿತು ತಪಸ್ಸು ಮಾಡಿದರು. ಜ್ಯೋತಿಷ್ಯ ಶಾಸ್ತ್ರ ಇದರಿಂದ 'ದರ್ಶನ' ಆಯಿತು. 'ಬೃಹತ್ ಜಾತಕ' 'ಲಘು ಜಾತಕ' 'ಗ್ರಹ ಲಾಘವ' ಮುಂತಾದ ಅಮೂಲ್ಯ ಗ್ರಂಥಗಳನ್ನು ರಚಿಸಿದರು.

## ತಿಥಿಗಳು, ಮಹೂರ್ತ

ಸೌರ ಪುರಾಣದಲ್ಲಿ ವ್ಯಾಸರು "ಉಮಯಾ ಸಹ ವರ್ತತೇ ಇತಿ ಸೋಮ"ಎಂದು ಈಶ್ವರನನ್ನು ಕರೆದರು. ಅದಕ್ಕೆ ಎಲ್ಲರೂ ಸೋಮವಾರ ಉಪವಾಸ ಮಾಡಿ ಈಶ್ವರನ ಸೇವೆ ಮಾಡುತ್ತಾರೆ. ಇತರ ಗ್ರಹಗಳಂತೆ ಚಂದ್ರನೂ ಸಹ ಆಕಾಶದಲ್ಲಿ ಸುತ್ತುತ್ತಾನೆ. ಒಂದು ಸಲ ಅಶ್ವಿನೀ ಮೊದಲಾದ ನಕ್ಷತ್ರಗಳಲ್ಲಿ ರೇವತೀ ಕೊನೆಯ ಕಲೆಗೆ ಬರಲು ಸುಮಾರು 27 ದಿವಸಗಳು ಹಿಡಿಯುವುದು. ಸೂರ್ಯನಿಗೆ ಒಂದು ವರ್ಷ ಬೇಕು. ಆದರೆ ಚಂದ್ರನಿಗೆ ಒಂದು ತಿಂಗಳು ಸಾಕು. ಆ ಚಂದ್ರನು ಒಂದೊಂದು ನಕ್ಷತ್ರದಲ್ಲಿ ಒಂದು ಒಂದು ದಿನ ಸಂಚಾರ ಮಾಡುತ್ತಾನೆ. ಒಂದು ನಕ್ಷತ್ರದಲ್ಲಿದ್ದ ಹಾಗೆ ಮತ್ತೊಂದರಲ್ಲಿರಲು ಸಾಧ್ಯವೇ ? ಆಗದು. ಸೂರ್ಯನು ಒಂದು ದಿನಕ್ಕೆ ಒಂದು ಡಿಗ್ರಿಯಷ್ಟು ಹೋಗುತ್ತಾನೆ. ಚಂದ್ರನು 13 ಡಿಗ್ರಿಗಳು ಸಾಧಾರಣ ಹೋಗುತ್ತಾನೆ. ಒಂದು ದಿನಕ್ಕೆ ಇಬ್ಬರಿಗೂ 12 ಡಿಗ್ರಿಗಳು ವ್ಯತ್ಯಾಸವಾಯಿತು. ಚಂದ್ರನು ಸೂರ್ಯನಿಂದ 180 ಡಿಗ್ರಿಗಳು ಹೋದರೆ ಪೂರ್ಣನಾರಗುತ್ತಾನೆ. ಅದಕ್ಕೆ 15 ದಿನಗಳು ಬೇಕು. ಏಕೆ ? 12 ಡಿಗ್ರಿ ಮುಂದೆ ಹೋಗಲು 1 ದಿನ, 180 ಡಿಗ್ರಿಗಳು ಹೋಗಲು 15 ದಿನಗಳು.

ನೇರವಾಗಿ ಎದುರಿನಲ್ಲಿ ಬಂದರೆ ಸೂರ್ಯನ ಬೆಳಕು ಸಂಪೂರ್ಣ ಚಂದ್ರನ ಮೇಲೆ ಬೀಳುವುದು. ದಿನಗಳು ಕಳೆದಂತೆ ಸ್ವಲ್ಪವಾಗಿ ಈ ಬೆಳಕು ಕಮ್ಮಿ. ಆದುದರಿಂದ ಚಂದ್ರನಲ್ಲಿ ಸ್ವಲ್ಪ ಸ್ವಲ್ಪವಾಗಿ ಈ ಬೆಳಕು ಕಮ್ಮಿ. ಆದುದರಿಂದ ಚಂದ್ರನಲ್ಲಿ ಸ್ವಲ್ಪ ಸ್ವಲ್ಪ ಭಾಗವೇ ಬೆಳ್ಳಗೆ ಕಾಣುವುದು. ಸಂಪೂರ್ಣ ಬೆಳ್ಳಗಾದರೆ ' ಪೂರ್ಣಿಮೆ ' ಎಂದು ಕರೆದರು.

. ಸೂರ್ಯನ ಜೊತೆಯಲ್ಲಿಯೇ ಇದ್ದರೆ ? ಸೂರ್ಯನೂ ಚಂದ್ರನೂ ಒಟ್ಟಿಗೇ ಕಾಣುವುದರಿಂದ ಚಂದ್ರನ ಮೇಲೆ ಬೆಳಕೂ ಇಲ್ಲ. ಅವನು ಕಾಣುವುದೂ ಇಲ್ಲ. ಇದಕ್ಕೆ ಆ ದಿನಕ್ಕೆ ' ಅಮಾವಾಸ್ಯೆ ' ಎಂದು ಕರೆದರು.

ಚಂದ್ರನ ಮೇಲೆ ಕ್ರಮ ಕ್ರಮವಾಗಿ ಸೂರ್ಯನ ಬೆಳಕು ಬೀಳುವುದು. ಸಂಪೂರ್ಣವಾಗಿ ಬೆಳ್ಳಗಾಗಲು 15 ದಿನಗಳು ಹಿಡಿಯುವುದು. $^1/_{15}$ ಭಾಗ ಮಾತ್ರ ಬೆಳಕು ಚಂದ್ರನ ಮೇಲೆ ಹೆಚ್ಚು ಹೆಚ್ಚು ಬೀಳುವುದು. ಒಂದನೇ ದಿನ $^1/_{15}$, ಎರಡನೆಯ ದಿನ $^2/_{15}$ ಭಾಗ, ಪೂರ್ಣಿಮೆ ದಿನ $^{15}/_{15}$ ಭಾಗ.

ಈ $^1/_{15}$ ಭಾಗವನ್ನು 'ತಿಥಿ' ಎಂದು ಕರೆದರು. ಆದುದರಿಂದ ಅಮಾವಾಸ್ಯೆಯಿಂದ 15ನೇ ತಿಥಿ ಪೂರ್ಣಿಮೆ ಆಗುವುದು. ಬೆಳಕು ಹೆಚ್ಚುತ್ತಾ ಹೋಗುತ್ತದೆ. ಆದುದರಿಂದ " ಶುಕ್ಲ ಪಕ್ಷ " ಅಂದರು. 'ಶುಕ್ಲ' ಎಂದರೆ ' ಬಿಳುಪು ' ಎಂದರ್ಥ.

ಪೂರ್ಣಿಮೆಯಿಂದ ತಿರುಗಿ ಅಮಾವಾಸ್ಯೆವರೆಗೆ 15 ತಿಥಿಗಳು. ಇದರಲ್ಲಿ ದಿನೇ ದಿನೇ ಬೆಳಕು $^1/_{15}$ ಭಾಗ ಕಡಿಮೆ ಆಗುತ್ತಾ ಬರುತ್ತದೆ. ಇಲ್ಲಿಯೂ 15 ತಿಥಿಗಳು ಇದನ್ನು "ಕೃಷ್ಣ ಪಕ್ಷ" ಅಂದರು. 'ಕೃಷ್ಣ' ಅಂದರೆ 'ಕಪ್ಪು' ಎದರ್ಥ. ವಿಷ್ಣು, ಕಪ್ಪು ಬಣ್ಣ. ಆ ಕಾರಣ 'ಕೃಷ್ಣ' ಎಂದು ಹೆಸರು.

'ಬಿಳಿ' 'ಕಪ್ಪು' ಎರಡು ಭಾಗಗಳಾದವು. ಒಟ್ಟು ಸೇರಿ ಒಂದು ತಿಂಗಳು. ದೇವತಗಳ ಪಕ್ಷ "ಶುಕ್ಲ ಪಕ್ಷ", ದೇವತಾ ಬಲ. ' ಕೃಷ್ಣ ಪಕ್ಷ' ರಾಕ್ಷಸ ಬಲ ಎಂದಾಯಿತು.

ಶುಕ್ಲಪಕ್ಷದಲ್ಲಿ 15 ತಿಥಿಗಳು, ಕೃಷ್ಣ ಪಕ್ಷದಲ್ಲಿ 15 ತಿಥಿಗಳು ಒಂದು ತಿಂಗಳಿಗೆ ಒಟ್ಟು 30 ತಿಥಿಗಳು.

ಚಂದ್ರನ ಕಲೆಗಳು

ಚಂದ್ರನು ಶುಕ್ಲ ಪಕ್ಷದ ಅಂತ್ಯದಲ್ಲಿ ಪೂರ್ಣನಾಗುವನು. ಅಲ್ಲಿಂದಾಚೆಗೆ ಬೆಳಕನ್ನು ಕಳೆದುಕೊಳ್ಳುವನು. ಈ ಬೆಳಕಿನ

ವೃದ್ಧಿಗೂ ಕಡಮೆಯಾಗುವ ಕಲೆಗೂ ಮಧ್ಯೆ ಅತಿ ಸೂಕ್ಷ್ಮವಾದ 'ಕಲೆ' ಒಂದು ಇರುವುದು. ಇದು ಅತ್ಯಂತ ಬೆಳಕಿನಿಂದ ಕೂಡಿರುವ ಕಲೆ. ಈ ಕಲೆಯು ಬಹಳ ಸೂಕ್ಷ್ಮ. ಲೆಕ್ಕಕ್ಕೆ ಸಿಗಲಾರದು. ಕಣ್ಣಿಗೆ ಕಾಣಲಾರದು. ಏಕೆ ? ಬಹಳ ಸ್ವಲ್ಪ ಹೊತ್ತು ಅದರ ಅವಧಿ. ಇದು ಭಾವನೆ. ಆದುರಿಂದ ಇದು " ಭಾವನಾ ಕಲೆ "

ನಮ್ಮ ಮನಸ್ಸಿನಲ್ಲಿ ಕಾಲವನ್ನು ಎಷ್ಟು ಕಡಿಮೆ ಎಂದು ತಿಳಿಯಲು ಸಾಧ್ಯ ? ಅಷ್ಟು ಕಾಲಕ್ಕಿಂದಲೂ ಅತ್ಯಂತ ಕಡಿಮೆ ಈ ಕಲೆಯ ಅವಧಿ. ಇದು ಚಂದ್ರನ 'ಶೋಡಶಕಲೆ' ಅಂದರು. 'ಪೂರ್ಣ ಕಲೆ' ಎಂದರು. ಈ ಕಲೆಯಲ್ಲಿ ಎಷ್ಟು ಬೆಳಕು ಚಂದ್ರನ ಮೇಲೆ ಬೀಳಲು ಸಾಧ್ಯವೋ ಅದಕ್ಕಿಂತ ಹೆಚ್ಚು ಬೆಳಕು ಎಂದು ಕವಿಗಳು ಮನಸ್ಸಿನಲ್ಲಿ ಭಾವಿಸಿದರು.

ಈ ಕಲೆಯಲ್ಲಿ ವಿಷ್ಣು, ಬ್ರಹ್ಮ, ರುದ್ರ ಅಥವ ಶಿವ ಈ ಮೂರು ದೇವತೆಗಳು ವಾಸಮಾಡುವರು. ಬಹಳ ಸೂಕ್ಷ್ಮ ಈ ಕಲೆ. ಈ ಮೂವರು ಯಾರ ಕಣ್ಣಿಗೂ ಕಾಣಿಸಲಾರರು.

ಈ ಕಲೆಯನ್ನೂ ಸೇರಿಸಿಕೊಂಡು 16 ಕಲೆಗಳಾದುವು. ಇದರಿಂದ ಚಂದ್ರ " ಶೋಡಶ ಕಲಾತ್ಮಕ " ಆದನು.

## ಮುಹೂರ್ತ

"ಸುಖಂ ಬಿಂದು ಮಾತ್ರಂಚ, ಕಷ್ಟಂಚ ಪರ್ವತೋಪಮಃ" ಅಂದರು ದೊಡ್ಡವರು. ಮನುಷ್ಯನಿಗೆ 'ಸುಖ' ಅನ್ನುವುದು ಎಳ್ಳಷ್ಟು. ಆದರೆ 'ಕಷ್ಟ' ಅನ್ನುವುದ ಪರ್ವತದ ಹಾಗೆ ಅಗಾಧವಾದುದು. ಬರಿಯ ಸುಖ. ಅದು ಒಂದು ಬೇಜಾರು. ಅದೂ ಒಂದು ಕಷ್ಟ. ಖಾರ ಎಷ್ಟು ಬೇಕಾದರೂ ತಿನ್ನಬಹುದು. ಆದರೆ ಸಿಹಿ ? ಸ್ವಲ್ಪ ಮಾತ್ರ ಸಾಧ್ಯ., ಆಗಲೂ ಮಧ್ಯೆ ಮಧ್ಯೆ 'ಖಾರ' ಬೇಕು. ಇಲ್ಲದೇ ಹೋದರೆ 'ಸಿಹಿ'ಯಲ್ಲಿಯೂ ಆನಂದ ಸಿಗುವುದಿಲ್ಲ. ಆದುದರಿಂದ ' ಕಷ್ಟ ' ಬೇಕೇ ಬೇಕು. ' ಸುಖ 'ದ ಸವಿ, ಕಷ್ಟವಿಲ್ಲದಿದ್ದರೆ ಕಾಣದು.

ಈ ಕಷ್ಟವು ಇದ್ದೇ ಇರುವುದು. ಎಲ್ಲರಿಗೂ ಒಂದು ತರಹೆ ಕಷ್ಟ. ಇಲ್ಲವೇ ಇನ್ನೊಂದು ತರಹೆ. ಅಂತೂ ಕಷ್ಟ ಅನ್ನುವುದು ಇದ್ದೇ ಇರುತ್ತದೆ. ಇದನ್ನು ಹೇಗೆ ತಡೆಯುವುದು? ಕಷ್ಟವನ್ನು ಸಹಿಸಿ ಅನುಭವಿಸುವವರೂ ಇದ್ದಾರೆ. ಅವರು ಬಹಳ ಅಲ್ಪ ಮಂದಿ. ಕಷ್ಟ 'ಬೇಡ' ಅನ್ನುವವರೇ ಹೆಚ್ಚು. ಅದು ತಪ್ಪುವುದು ಹೇಗೆ?

ಕಷ್ಟವು ತಪ್ಪಿದ್ದಲ್ಲ. ಆದರೆ ಅದು ನಮಗೆಬೇಡ. ಋಷಿಗಳೂ ಬುದ್ಧಿಶಾಲಿಗಳೂ ಆದವರಿಗೆ ಯೋಚನೆ ಆಯಿತು. ಯಾರಿಗೂ ಕಷ್ಟಬೇಡ.ಈ ಕಷ್ಟವನ್ನು ಯಾರಿಗೆ ಕೊಡಬೇಕು? ನಮ್ಮ ಕಷ್ಟ ನಮ್ಮದು. ಯಾರು ತಾನೇ ನಮ್ಮಬದಲು ಕಷ್ಟ ಅನುಭವಿಸುತ್ತಾರೆ? ಯಾರೂ ಮುಂದೆ ಬರುವುದಿಲ್ಲ. ಯಾರಿಗೂ ಬೇಡ ಈ ಕಷ್ಟ. ಬಹಳ ಗೊಂದಲಕ್ಕಿಟ್ಟಿತು ಪ್ರಶ್ನೆ. ಏನು ಮಾಡುವುದು? ಯಾರಿಗೆ ಕೊಡುವುದು? ತೆಗೆದಕೊಳ್ಳುವವರು ಯಾರು?

ಕೊನೆಗೆ, ಯಾರೋ ಗೊತ್ತಿಲ್ಲ. ಇದೇ ಉತ್ತರವಾಯಿತು! ಯಾರೋ ನಮ್ಮ ಕಷ್ಟಗಳನ್ನು ತೆಗೆದುಕೊಳ್ಳುತ್ತಾರೆ. ಆದರೇ ಅವರು ಯಾರೋ ಗೊತ್ತಿಲ್ಲ. ಗೊತ್ತಿಲ್ಲದವರು ನಮ್ಮ ಕಷ್ಟಗಳನ್ನು ಹೊಂದಲು ಸಿದ್ಧರಿದ್ದಾರೆ. ಗೊತ್ತಿಲ್ಲದವರು, ಗೊತ್ತಾಗಲು ಆಗದೆ ಇರುವವರು, ಯಾರಾಗಬೇಕು? ತಿರುಗಿ, ತಿರುಗಿ ಅದೇ ಪ್ರಶ್ನೆ. ಯಾರಿಗೂ ಗೊತ್ತಾಗದ ಆ ವ್ಯಕ್ತಿಗೆ 'ದೇವರು' 'ಪರಮಾತ್ಮ' ಅಂತ ಕರೆದರು. ಪರಮಾತ್ಮನು ಯಾರೋ ಯಾರಿಗೂ ಗೊತ್ತಿಲ್ಲ. ಅವನಿಗೆ 'ಪರಮಾತ್ಮ' ಎಂದು ಪೂಜೆ ಮಾಡಿದರು, ಮಾಡುತ್ತಲೇ ಇದ್ದಾರೆ.

ಯಾವರೀತಿ ಕಷ್ಟ ಜನಗಳಿಗೆ ಬರುತ್ತೆ? ಅದಕ್ಕೆ ಪರಹಾರ ಉಳ್ಳ ರೂಪವನ್ನು 'ಪರಮಾತ್ಮ'ನಿಗೆ ಕೊಟ್ಟರು.ಆ ರೀತಿಯಾಗಿ 'ಅವನನ್ನು' ಬೇಡಿ ಪೂಜೆ ಮಾಡಿದರು. ಕಷ್ಟಗಳೇನು ಒಂದು ತರಹವೇ? ಎರಡು ತರಹವೇ? ನಾನಾತರಹ ಕಷ್ಟಗಳು. ಆದಕ್ಕೆ ತಕ್ಕಂತೆ ನಾನಾ ತರಹೆ ರೂಪಗಳು. ಒಂದು ತರಹೆ ಕಷ್ಟ ಕಳೆಯಲು ಒಂದು ರೂಪ. ಮತ್ತೊಂದು ಕಳೆಯಲು ಮತ್ತೊಂದು ರೂಪ. ಹೀಗೆ ಎಷ್ಟೋ ರೂಪಗಳು ಪರಮಾತ್ಮನಿಗೆ. ಒಂದೊಂದು ರೂಪಿಗೂ

ಒಂದೊಂದು ಹೆಸರು. ಆ ಒಂದೊಂದು ರೂಪವೂ ಪರಮಾತ್ಮನದೇ ಆಗಿದೆ. ಆದರೂ ಬೇರೆ ಬೇರೆ ಗುಣಗಳು. ಬೇರೆ ಬೇರೆ ಹೆಸರುಗಳು.

## ದೇವತೆಗಳ ರೂಪ

ಈ ದೇವತೆಗಳ ರೂಪಗಳನ್ನು ಚಂದ್ರನ 16 ಕಲೆಗಳಿಗೆ ಕೊಟ್ಟರು. ಪ್ರತಿಪತ್ ಅಥವ ಪಾಡ್ಯದಿಂದ ಪೂರ್ಣಿಮಾವರೆಗೆ ತಿಥಿಗಳನ್ನು ದೇವತೆಗಳಿಗೆ ಹಂಚಿವುದು. 1) ಅಗ್ನಿ, 2) ಬ್ರಹ್ಮ 3) ಗೌರಿ, 4) ಗಣೇಶ 5) ನಾಗ, 6) ಸುಬ್ರಹ್ಮಣ್ಯ, 7) ರವಿ, 8) ಶಿವ, 9) ದೇವಿ, ಸರಸ್ವತಿ, ಭಗವತೀ ದುರ್ಗಾ, 10) ಯಮ, 11) ವಿಶ್ವೇದೇವತೆಗಳು, 12) ಹರಿ, 13) ಕಾಮ, 14) ಶಿವ ಮತ್ತು 15) ಚಂದ್ರ.

ಶುಕ್ಲಪಕ್ಷ ಪಾಡ್ಯದಿಂದ ಮೇಲಿನಂತೆ ದೇವತೆಗಳು ಅಧಿಪತಿಗಳಾರು. ಆಯಾ ದೇವತೆಯನ್ನು ಆಯಾ ತಿಥಿಗಳಲ್ಲಿ ಪೂಜೆಮಾಡಿದರೆ ಬೇಗನೆ ಕೆಲಸವಾಗುವುದು. ವರ್ಷಗಟ್ಟಲೆ ದೇವಸ್ಥಾನ ಸುತ್ತಿದರೆ ಏನು ಪ್ರಯೋಜನ? ಆ ವಿಗ್ರಹ ಬರಿಯ ಕಲ್ಲೇ. ಆದರೆ ಒಂದು ಕಾಲದಲ್ಲಿ ಸ್ವಲ್ಪಹೊತ್ತು, ಆ ದೇವತೆ ಆ ಕಲ್ಲುರೂಪದಲ್ಲಿ ವಾಸಮಾಡುತ್ತಾನೆ. ಆ ಹೊತ್ತು ಯಾವುದು? ಆ ದಿನ ಯಾವುದು? ಎಂದು ತೋರಿಸುವುದು ಈ ತಿಥಿಗಳು ಮತ್ತು ಈ ಮೂಹೂರ್ತ.

ಯಾವ ಕಾಲದಲ್ಲಿ ಕೆಲಸ ಮಾಡಿದರೆ ಒಳ್ಳೆಯದು ಎಂದು ಈ ಮೂಹೂರ್ತ ತೋರಿಸುತ್ತೆ. 'ಮುಹೂರ್ತ' ಅನ್ನುವುದು ಜನ ಜೀವನಕ್ಕೆ ಅಗತ್ಯ. ಆದುದರಿಂದ ಋಷಿಗಳು ಏನು ಮಾಡಿದರು? ಶುಭ ಮುಹೂರ್ತಗಳನ್ನು ತಿಳಿಸಬೇಕು. ಜನಗಳಿಗೆ ಒಳ್ಳೆಯದು ಆಗಬೇಕು. ಕಷ್ಟಗಳು ಕಡಿಮೆ ಆಗಬೇಕು. ಅದಕ್ಕೆ ಈ ಮುಹೂರ್ತ ಎಂತಹುದ? ಯಾವುದು ಶುಭ? ಯಾವುದು ಕೆಟ್ಟದ್ದು? ಎಂದು ತಿಳಿಸಿದರು. ಈ ಶಾಸ್ತ್ರಕ್ಕೆ 'ಮುಹೂರ್ತ ದೀಪಿಕಾ' ಅಂದರು. "ಮುಹೂರ್ತ ಚಿಂತಾಮಣಿ" 'ಮುಹೂರ್ತ ಗಣಪತಿ' ಹೀಗೇ ಎಷ್ಟೋ ಗ್ರಂಥಗಳನ್ನು ಬರೆದರು. ಉಪಯೋಗಿಸುವವರು ವಿರಳ. ಎಲ್ಲರಿಗೂ ಅವಸರ. ಮುಹೂರ್ತ ಕಾಯುವುದು ಹೇಗೆ? ಏನೋ ಅವಸರ.

ಒಂದು ದಿನಕ್ಕೆ 24 ಘಂಟೆಗಳು. ಈ ಕಾಲದಲ್ಲಿ ಚಂದ್ರನು ಒಂದು ನಕ್ಷತ್ರದಲ್ಲಿ ಸಂಚಾರ ಮಾಡುವನು. ಈ 24 ಘಂಟೆಗಳನ್ನು "ಕಲೆ" ಅಂದರೆ ಹದಿನಾರು ಭಾಗಮಾಡಿದರು. ಒಂದೊಂದು ಕಲೆಗೆ ಒಂದೊಂದು ಭಾಗವಾಯಿತು. ಈ ಕಾಲಕ್ಕೆ 1½ ಘಂಟೆ ಆಯಿತು. ಇಷ್ಟು ಕಾಲಕ್ಕೆ 3¾ ಘಳಿಗೆ ಆಯಿತು. ಒಂದು ಮುಹೂರ್ತಕ್ಕೆ 3¾ ಘಳಿಗೆ ಆಯಿತು ಅಥವಾ 1½ ಘಂಟೆ ಆಯಿತು. ಒಂದು ನಕ್ಷತ್ರಕ್ಕೆ 16 ಮುಹೂರ್ತಗಳು, ಒಂದು ತಿಥಿಗೆ 16 ಮುಹೂರ್ತಗಳಾದವು.

ಒಂದು ಕೆಲಸಕ್ಕೆ ಸಾವಿರಾರು ಸಲ ಯತ್ನ. ಆದರೇ ಸರಿಯಾದ ಮುಹೂರ್ತದಲ್ಲಿ ಒಂದು ಸಲ, ಒಂದೇ ಒಂದು ಸಲ ಸಾಕು. ಕೆಲಸ ಆದಂತೆಯೇ. ಮುಹೂರ್ತ ಎಲ್ಲರಿಗೂ ಬೇಕಾದದ್ದು.

---

# 5

## ಸೂರ್ಯ–ಕಾರಕ ಗುಣಗಳು

ಸೂರ್ಯ ಉದಯ ಆಯಿತು. ಎಲ್ಲರಿಗೂ ಎಚ್ಚರ. ಆಗ ನಮಗೆ ಇಷ್ಟವಿರಲಿ, ಇಲ್ಲದೇ ಇರಲಿ ಕೆಲಸಮಾಡಿಸುತ್ತೆ. ಈ ಬಲವಂತ ಪ್ರೇರಣೆಗೆ "ಕಾರಕ" ಎಂದರು. ಈಗ ಕೆಲಸದ ಕಾರಕ ಸೂರ್ಯ. ಕೆಲಸ ಅಂದರೆ "ಕರ್ಮ" ಅಥವಾ "ಉದ್ಯೋಗ" ಎಂಬ ಸಂಸ್ಕೃತ ಶಬ್ದಗಳು ಚಾಲತಿಯಾದುವು. ಸೂರ್ಯ ಇದರಿಂದ "ಉದ್ಯೋಗ ಕಾರಕ" ಆದನು.

ಸೂರ್ಯನ ಬೆಳಕು ಇರುವ ಕಾಲವೇ "ದಿವಸ". ಇದರಿಂದ ಸೂರ್ಯನಿಗೆ "ದಿವಾಕರ" ಎಂಬ ಹೆಸರು. ಸೂರ್ಯನ ಬೆಳಕಿಲ್ಲ. ಆಗ ಕತ್ತಲು ಪ್ರಾರಂಭ. ಯಥಾಪ್ರಕಾರ ಸೋಮಾರಿತನ, ನಿದ್ರೆ.

"ನಿದ್ರೆ" ಎಂತಹ ವಿಚಿತ್ರ ಶಬ್ದ! ನಮ್ಮ ಕೆಲಸ ಏನೇ ಇರಲಿ, ನಮ್ಮ ಅಂಗಗಳಿಂದ. ಇಂದ್ರಿಯ ಚಾಲನೆ ನಮ್ಮಬುದ್ಧಿಯ ಆದೇಶದಿಂದ. "ನಿದ್ರೆ" ಬುದ್ಧಿಗೆ ಕವಿದ ಕತ್ತಲು. ಆಗ ಬುದ್ಧಿ ಏನು ಕೆಲಸವನ್ನೂ ಮಾಡದು.ಯಾವಾಗಲೂ ಚುರುಕು. ಈ ಬುದ್ಧಿ. ಮಂಕು ಕವಿಸಿ ಸ್ತಬ್ಧವನ್ನಾಗಿಸುವ ಶಕ್ತಿ, ಈ ಕತ್ತಲು ಈ ನಿದ್ರೆ. ಇದನ್ನು "ಮಾಯೆ" ಎಂದರು ವೇದಾಂತಿಗಳು.

ಕತ್ತಲಿನಲ್ಲಿ ಜಡವಿದ್ದ ಈ ಬುದ್ಧಿ, ಬೆಳಗಾದರೆ ತಾನಾಗಿಯೇ ಚುರುಕುಆಗುತ್ತೆ. ಈ ಸೂರ್ಯನ ಬೆಳಕಿಗಿದೆ ಈ ಶಕ್ತಿ. ಬುದ್ಧಿಯನ್ನು ಎಚ್ಚರಗೊಳಿಸಿ ಕಾರ್ಯಮುಖಕ್ಕೆ ತರುತ್ತೆ. ಬೆಳಕಿನ ಈ ಅಸಾಧಾರಣ ಗುಣ ದೈವೀಕ.

ಈ ರೀತಿ ಎಚ್ಚರ ಮಾಡುವುದಕ್ಕೆ "ಪ್ರಚೋದನೆ" "ಜಾಗರಣೆ" ಎಂದು ಕರೆದರು. ಈ ಕಾರಣ ಸೂರ್ಯನಿಗೆ ಬೆಳಗಿನ ಝಾವ ಪ್ರಾರ್ಥನೆ ಮಾಡಬೇಕು. ವೇದಗಳಲ್ಲಿ "ಧೀಯೋ ಯೋನಃ ಪ್ರಚೋದಯಾತ್" ಎಂದರು. ಇದು ಗಾಯತ್ರಿ ಮಂತ್ರ. ಇದರ ಅರ್ಥವೇನು? ನಮ್ಮ ಬುದ್ಧಿಯನ್ನು ಎಚ್ಚರಗೊಳಿಸಲಿ. ನಮ್ಮ ನಮ್ಮ ಬುದ್ಧಿಯಸೋಮಾರಿತನವನ್ನು ತೊಲಗಿಸಲಿ. ಎಚ್ಚರವಾದ ಈ ಸ್ಥಿತಿಯೇ "ಜಾಗೃತಿ". ರವಿಗೆ "ಜಾಗೃತಾವಸ್ಥೆ" ಒಂದು ಗುಣ. ಎಚ್ಚರವಾದ ಬುದ್ಧಿ ಉಳ್ಳವರಿಗೆ "ಸೂರಯಃ" ಎಂದರು.

## ಅಧಿಕಾರ ಸೂಚಕ ರವಿ

ಕೆಲಸ ಮಾಡಿಸುವ ಶಕ್ತಿ ಸೂರ್ಯನಿಗಿದೆ. ಆ ಶಕ್ತಿಯೇ ಅವನ ತೇಜಸ್ಸು. ಕೆಲಸ ಮಾಡಿಸುವುದು ಅಧಿಕಾರ,ರಾಜನ ಲಕ್ಷಣ. ಅಧಿಕಾರ ರಾಜನ ಲಕ್ಷಣ ರಾಜಾಧಿರಾಜರುಗಳೂ ಉನ್ನತ ಅಧಿಕಾರಿಗಳು ಇವನ ಅಂಶದಲ್ಲಿ ಹುಟ್ಟುತ್ತಾರೆ. ಈ ಕಾರಣ ರವಿಯು "ಅಧಿಕಾರ ಕಾರಕ"

## ಪಾಲನಾ ಶಕ್ತಿ

ಪ್ರಾಣಿಗಳು ಗಿಡಗಳು ಮನುಷ್ಯರು ಸೂರ್ಯನ ಬೆಳಕಿಲ್ಲದ ಜಾಗದಲ್ಲಿ ಇವರಿಗೆ ಏನು ಗತಿ? ಇದು ಎಲ್ಲರಿಗೂ ತಿಳಿದ ವಿಷಯ. ಗಿಡ ಬೆಳೆಯುವುದಿಲ್ಲ. ಬೆಟ್ಟದ ಬುಡದಲ್ಲಿ ಇರಲಿ ಸೂರ್ಯನ ಪ್ರಕಾಶವನ್ನು ಹುಡುಕಿಕೊಂಡು ಎತ್ತರಕ್ಕೆ ಬೆಳೆಯುತ್ತವೆ. ಸೂರ್ಯನ ಬಿಸಿಲಿನಲ್ಲಿ ತಾನೇ ಹಣ್ಣುಗಳು ಪಕ್ವವಾಗುವುದು? ಗಿಡಮರಗಳಾಗುವುದು? ಎಳೆಯ ಮಕ್ಕಳು ದೊಡ್ಡವರಾಗುವುದು? ಬೆಳೆಸುವ ಶಕ್ತಿ ಈ ಬೆಳಕಿಗೆ. ನಾಶ ಮಾಡುವ

ರೋಗಗಳಿಂದ ಇದು ಕಾಪಾಡುತ್ತದೆ. ಬೆಳಕಿನ ಶಾಖ ಸಹಜಗುಣಗಳನ್ನು ಬದಲಾಯಿಸದು. ಆದರೆ ಅಭಿವೃದ್ಧಿ ಮಾಡುತ್ತದೆ! ಬೆಂಕಿಯಶಾಖ ಹಾಗಲ್ಲ. ಅದರ ಗುಣಗಳನ್ನು ಮಾರ್ಪಾಟು ಮಾಡುತ್ತದೆ. ಇದೇ ಇದರ ವಿಚಿತ್ರ,

ಮನುಷ್ಯ, ಇಲ್ಲ, ಪ್ರಾಣಿ. ಆ ದೇಹ ಸಂರಕ್ಷಣೆಗಾಗಿ ಮೂಲಿಕೆಗಳ ಉತ್ಪತ್ತಿ. ಈ ಔಷಧಗಳೂ, ಅದನ್ನು ಬಳಸತಕ್ಕ ವೈದ್ಯರು ಇದೇ ಗ್ರಹದ ದೆಸೆಯಿಂದ ಹುಟ್ಟುತ್ತಾರೆ.

## ಸನ್ಮಾರ್ಗ ದರ್ಶಕ

ಕಳ್ಳತನ ಮಾಡಬೇಕು? ಯಾರಾದರೂ ನೋಡಿದರೆ? ಯಾರೂ ಇರಕೂಡದು. ಯಾರೂ ನೋಡಕೂಡದು, ಕತ್ತಲಿನಲ್ಲಿ ಮಾಡಬೇಕು. ಬೆಳಕಿನಲ್ಲಿ ಆಗದು. ಆಗ ಮಾಡಬಹುದೇ? ಮಾಡಿದರೆ, ಅದು ದರೋಡೆ! ಕಳ್ಳತನಅಲ್ಲ.

ಕೆಟ್ಟ ಕೆಲಸಗಳು, ಏನೇ ಆಗಲಿ, ಕೆಟ್ಟದ್ದು. ಅದರಿಂದ ಸಮಾಜಕ್ಕೆ ಪರಿಣಾಮ ಕೆಟ್ಟದ್ದು. ಈ ಕೆಲಸಗಳು ಈ ಸೂರ್ಯನ ಬೆಳಕಿನಲ್ಲಿ ಸಾಧ್ಯವಿಲ್ಲ. ಧೈರ್ಯವಾಗಿ ಮಾಡಬಹುದಾದ ಕೆಲಸ, ಎಲ್ಲರ ಮೆಚ್ಚುಗೆ ಪಡೆಯುವಕೆಲಸ, ಈ ಬೆಳಕಿನಲ್ಲಿಯೇ ಸರಿ. ಇದು ಸತ್ವಗುಣದ ಕುರುಹು. ಈ ಕಾರಣ ಸೂರ್ಯನಿಗೆ "ಸಾತ್ವಿಕ್ ಗ್ರಹ", "ಕರ್ಮ ಸಾಕ್ಷಿ" ಎಂದರು.

## ಕೀರ್ತಿ–ರವಿ ಪ್ರಸಾದ

ಸೂರ್ಯನಬೆಳಕು, ಅದರ ಪ್ರತಿಭೆ, ಎಲ್ಲರಿಗೂಗೊತ್ತು. ಎಲ್ಲರಲ್ಲಿಯೂ ಪ್ರಸಿದ್ಧಿ. ಆ ಕೀರ್ತಿ ಸೂರ್ಯನದು. ಇವನ ಅನುಗ್ರಹದಿಂದ ಕೀರ್ತಿ ನಮಗೂ ಬಂದೀತು. ಒಳ್ಳೆಯ ಹೆಸರು, ಎಲ್ಲರಲ್ಲಿಯೂ ಒಂದೇ ಸಮದಕಾರುಣ್ಯಾ, ತಾನು ಸರ್ವಶ್ರೇಷ್ಠನು, ತನ್ನಿಂದಲೇ ವಿಶಿಷ್ಟ ಜಗತ್ತಿನ ವ್ಯಾಪಾರಿಗಳು ನಡೆಯುವುದು. ಸೂರ್ಯನದೇ ಹಿರಿಮೆ ಇದು. ಅದರಂತೆಯೇ ಜನಗಳಿಗೆ ಒಳ್ಳೆಯ ಕೀರ್ತಿ ಬೇಕು. ಆಗ ಒಳ್ಳೆಯ ಕೆಲಸಗಳನ್ನು ಮಾಡಬೇಕು.ಕೀರ್ತಿಗೆ ಮೀಸಲು ತ್ಯಾಗ. ಸತ್ಕೀರ್ತಿಗಾಗಿ ಉದಾತ್ತ ಗುಣಗಳು

ಆಗತ್ಯ. ದಾನ, ಧರ್ಮ, ಅವಶ್ಯ ಬೇಕಾಗಿರುವ ಸಾಧನೆಗಳು. ಎಲ್ಲರೂ ತನ್ನ ಉದಾತ್ತ ಗುಣಗಳನ್ನು ಹೊಗಳಬೇಕು. ಆಗ ಮನಸ್ಸಿಗೆ ಒಂದು ತೃಪ್ತಿ. ಕೀಳು ಬುದ್ಧಿ, ಭಿಕ್ಷೆ ಬೇಡುವುದು ತನ್ನ ಕೀರ್ತಿಗೆ ಕುಂದು ಇವರು ಸ್ತೋತ್ರಪ್ರಿಯರು. ಸ್ತೋತ್ರ ಮಾಡುವವರಿಗೆ ಉದಾರತೆ ತೋರಿಸುವವರು ಈ ಗ್ರಹದ ಅಂಶದಲ್ಲಿ ಜನಿಸಿದವರು.

ಎಲ್ಲಾ ಕಾರ್ಯಗಳಲ್ಲಿ ಇವರು ಬೆಳಕಿಗೆ ಬರಬೇಕು. ಎತ್ತರದ ವೇದಿಕೆ ಬೇಕು. ಎತ್ತರದ ಪ್ರದೇಶ ಈ ರವಿಯದು. ಅಧಿಕಾರವೂ ಒಂದು ಎತ್ತರದ ಸ್ಥಾನ. ದೇಹದಲ್ಲಿಯೂ ಎತ್ತರವಾದ ಸ್ಥಾನ ತಲೆ. ಆ ತಲೆಯೂ ಈ ರವಿಯೇ ಹೌದು. "ಶಿರೋ ಸೂಚಕ" ಎಂದರು. ಸಂಸಾರದಲ್ಲಿ ತಲೆ ಆದ ತಂದೆಗೂ ಇವನೇ ಕಾರಕ.

## ರವಿಯ ಅಂಶದಲ್ಲಿ ಜನಿಸಿದವರ ಗುಣಗಳು

ರವಿ ಗ್ರಹದ ಅಂಶದಲ್ಲಿ ಜನಿಸಿದವರು ಎತ್ತರದ ದೇಹ ಉಳ್ಳವರು, ಸ್ತೋತ್ರಪ್ರಿಯರು. ಹುಟ್ಟಿದಾರಭ್ಯ ಉತ್ತಮರಂತೆ ಗೌರವಿಸಲ್ಪಡುವವರು. ಅಧಿಕಾರ ಲಾಲಸೆಯುಳ್ಳವರು, ದಯಾಶೀಲರು, ಕ್ಷಮಾಗುಣದಿಂದ ಉತ್ತಮರು. ಆಶ್ರಿತರಿಗೆ ಹಿತ ಬಯಸುವವರು. ಸಾರ್ವಜನಿಕ ಸೇವೆ ಮಾಡುವವರು. ಗೌರವ ಅಂತಸ್ತುಗಳಿಗೆ ತಕ್ಕಂತೆ ನಡವಳಿಕೆಯಿಂದ ವಂಶದ ಕೀರ್ತಿ ಕಾಪಾಡುವರು. ಅಧಿಕಾರಿಗಳು, ರಾಜರು, ಪ್ರಸಿದ್ಧ ಪುರುಷರು, ಎಲ್ಲರೂ ರವಿ ಗ್ರಹದ ಅನುಗ್ರಹದಿಂದ ಹುಟ್ಟಿದವರು.

ರವಿ ಗ್ರಹದ ಶಾಪದಿಂದ ಹುಟ್ಟಿದವರು ಈ ಗುಣಗಳಿಗೆ ವಿರುದ್ಧ. ಅಧಿಕಾರ ದುರುಪಯೋಗ ಮಾಡುವರು, ಅಪಕೀರ್ತಿಯ ಭಯವಿಲ್ಲದವರು, ವಂಶದ ಗೌರವವನ್ನು ಹಾಳುಮಾಡುವವರು, ರಾಜದ್ರೋಹಿಗಳು, ಆಶ್ರಿತರಿಗೆ ಹಿಂಸೆಕೊಟ್ಟು ಅವರಿಂದ ಧನಕನಕ ಅಪಹಾರ ಮಾಡುವವರು, ದುರಹಂಕಾರಿಗಳು, ಹುಟ್ಟಿದ ಮನೆ, ದೇಶ ಬಿಟ್ಟು ಪರಜನಗಳಲ್ಲಿ ಬೆಳೆದು ಸ್ವಜಾತಿ ಸ್ವಕುಟುಂಬ ಸ್ವದೇಶಗಳಿಗೆ ದ್ರೋಹ ಮಾಡುವವರು ಇವರು.

# 6

## ಸ್ತ್ರೀ ಕಾರಕ ಚಂದ್ರ

ನೋಡಲು ಚೆಂದ. ಆ ಕಾರಣ "ಚಂದ್ರ" ಎಂದರು. ಹೆಣ್ಣು ಕೂಡ, ಚಂದ್ರನಂತೆ ನೋಡಲು ಅಂದ. ಚಂದ್ರನಿಗೆ ಶುಕ್ಲ ಕೃಷ್ಣ ಪಕ್ಷಗಳ ಏರಿಳಿತ. ಹಾಗೆಯೇ ಹೆಣ್ಣು. ಚಂಚಲ ಪ್ರಕೃತಿ, ಒಂದು ದಿನವೇನು? ಒಂದು ಘಳಿಗೆಗೆ ಇದ್ದದ್ದು ಘಳಿಗೆಗೆ ಇಲ್ಲ. ಈ ಚಂದ್ರನಿಗೆ "ಸ್ತ್ರೀಕಾರಕ" ಎಂದರು.

## ಉದ್ವೇಗ

ಹತ್ತಿರದಲ್ಲಿ ಹುಚ್ಚಾಸ್ಪತ್ರೆ. ಒಳ್ಳೆಯ ಪೂರ್ಣಿಮೆ, ಬೇಡ, ಅಮಾವಾಸ್ಯೆಯೇ ಆಗಲಿ, ರಾತ್ರಿ ಆಯಿತು. ಆಸ್ಪತ್ರೆಯಲ್ಲಿ ಗದ್ದಲವೋ ಗದ್ದಲ. ಹುಚ್ಚುವಾಸಿ ಆಗಿದೆ. ಆವರಿಗೂ ಮರಳಿ ಹುಚ್ಚು.

ದಿಗ್ವಿಜಯಕ್ಕೆ ಹೂರಟಿದ್ದ ರಾವಣನಿಗೆ ಮಾರ್ಗ ಮಧ್ಯದಲ್ಲಿ ರಾತ್ರಿ ಆಯಿತು. ಬಿಡಾರ ಮಾಡಿದ. ಪೂರ್ಣಿಮೆ ಬೇರೆ. ನೋಡಿದರೆ ನೋಡಬೇಕು, ನೋಡುತ್ತಾ ಇರಬೇಕು ಎನ್ನಿಸಿತು. ಎಷ್ಟು ಮುದ್ದು ಈ ಚಂದ್ರ ! ಆದರಿಂದ ಮೈ ಬೆಚ್ಚಗಾಗಿ "ಜ್ವರ" ಬಂದಂತೆ ಆಯಿತು. ಚಂದ್ರ ಕಾಂತ ಶಿಲೆ ಒಂದು ಕಲ್ಲು. ಆದರಿಂದ ಎಂದಹ ತಾಪವಾದರೂ ಸರಿ, ತಣ್ಣಗಾಗುತ್ತೆ! ತಾಪ ತಾಳದ ಈ ರಾವಣ ಆ ಕಲ್ಲಿನ ಮೇಲೆ ಮಲಗಿ ನೋಡಿದ.

ಆದರೂ ತಾಪ ಬಗೆಹರಿಯಲಿಲ್ಲ. ಗ್ರಹಚಾರ, ಎದುರಿಗೇ ರಂಭೆ ಬರಬೇಕೆ? ತನ್ನ ಪ್ರಿಯ ನಳಕೂಬರನ ಹತ್ತಿರಕ್ಕೆ ಹೋಗುತ್ತಿದ್ದಳು. ಆವನಿಗೆ ರಂಭೆ ಸೊಸೆ.

ಬಗೆ ಬಗೆಯಲ್ಲಿ ಹೇಳಿದಳು. "ಮಾವ"ಎಂದು ನಮಸ್ಕಾರ ಮಾಡಿದಳು. 'ಬೇಡಿದಳು, ಗೋಗರೆದಳು. ಬಿಟ್ಟನೇ ರಾವಣ? ಮಿತಿಮೀರಿದ ತಾಪ. ಆವಳನ್ನು ಹಿಡಿದು ಬಲಾತ್ಕಾರ ಮಾಡಿದ. ಆಗ ಅವನಿಗೆ ತಂಪಾಯಿತು.!

ರಾವಣ ಬಹಳ ಕರ್ಮಠ. ಅಂತವನಿಗೆ ಎಚ್ಚರ ತಪ್ಪಿಸಿ, ಹುಚ್ಚು ಹಿಡಿಸಿ ರಂಭೆಯನ್ನು ಕೆಡಿಸುವಂತೆ ಮಾಡಿದ್ದು ಯಾವುದು ? ಈ ಚಂದ್ರ, ಈ ಬೆಳದಿಂಗಳು. ಇದರಿಂದ ಶಾಪ ಬೇರೆ ತಟ್ಟಿತು. !

ಯಾವಳೋ ಪ್ರಾಯದವಳು. ಗಂಡ ಸತ್ತು ಅವಳಿಗೆ ಹುಚ್ಚು ಹಿಡಿಯಿತು. ಬಾವಿಯಲ್ಲಿ ಬಿದ್ದು, ಪ್ರಾಣ ಕಳೆದುಕೊಂಡು ಪಿಚಾಚಿ ಆದಳು. ದಾರಿಯಲ್ಲಿ ಬರುವವರಿಗೆ ಕಾಣಿಸುತ್ತಾಳೆ. ಈ ಪೂರ್ಣಿಮೆಯ ಬೆಳದಿಂಗಳಿನಲ್ಲಿ ಬೆಳ್ಳನೆಯ ಬಟ್ಟೆಯಿಂದ ಅವಳ ರೂಪು ಕಾಣುತ್ತದೆ. "ಮೋಹಿನೀ" ಅಂದರು. ಇದು ಒಂದು ಭ್ರಮೆ. ಮನಸ್ಸಿನ ಭಯ. ಅವಳ ತೃಪ್ತಿಯಿಲ್ಲದ ಬಾಳು , ಈ ಬೆಳಕಿನಲ್ಲಿ ರೂಪು ಹೊಂದಿ ಕಣುತ್ತೆ. ಈ "ಮಾಯಾಶಕ್ತಿ" ಚಂದ್ರನಿಗಿದೆ.

ಮನಸ್ಸಿನ ಉದ್ವೇಗಗಳು ಚಂದ್ರನಿಂದ ಉಲ್ಬಣವಾಗತ್ತದೆ. ಇದರಿಂದ "ಮನೋ ಕಾರಕ" ಎಂದು ಕರೆದರು. "ಚಂದ್ರಮಾ ಮನಸೋ ಜಾತಃ" ಅಂದರು ಋಷಿಗಳು.

## ಸಂಚಾರ ಕಾರಕ

ಆಕಾಶದಲ್ಲಿ ಗ್ರಹಗಲೂ ಚಲಿಸುತ್ತವೆ. ಒಂದೊಂದು ಗ್ರಹಕ್ಕೆ ಒಂದೊಂದು ವೇಗ, ಒಂದೊಂದು ಪಥ, ಬಹಳ ಬೇಗ ಓಡುವ ಗ್ರಹವೇ ಈ ಚಂದ್ರ, ಎಲ್ಲ ಗ್ರಹಗಳಿಗಿಂದಲೂ ಇವನ ವೇಗ ಹೆಚ್ಚು. ಚಂದ್ರನು ಮನಸ್ಸನ್ನು ತಲ್ಲಣಿಸುತ್ತಾನೆ. ಕುಣಿಸುತ್ತಾನೆ. ಕಾರು ನೂರು ಮೈಲಿ ಗಂಟೆಗೆ ಓಡುತ್ತದೆ. ಆದರಲ್ಲಿ ಕೂತವರು ಹೇಗೆ ಶಾಂತವಾಗಿರಲು ಸಾಧ್ಯ? ಅಂತಯೇ ಚಂದ್ರನಿಗೆ ವೇಗ ಗತಿ. ಆದುದರಿಂದ ಮನಸ್ಸೂ ಅಷ್ಟೇ ವೇಗ. ಆದಕ್ಕೆ 'ಮನೋಜವಂ" ಎಂದು ಅಂಜನೇಯನ ಹಾರಾಟವನ್ನು ಹೋಲಿಸಿದರು. ಎಲ್ಲ ಗ್ರಹಗಳ ವೇಗಕ್ಕಿಂತ ಇವನ ವೇಗ ಹೆಚ್ಚುವರಿ, ಆದ್ದರಿಂದ ಇವನು "ಸಂಚಾರ ಕಾರಕ".

### ಜಲಕಾರಕ

ಸಮುದ್ರ ಅಗಾಧವಾದುದು. ಅಲ್ಲಿರುವಷ್ಟು ನೀರು ಬೇರೆ ಎಲ್ಲಿಯೂ ಇರದು. ಸುಮ್ಮನೆ ಇಷ್ಟು ನೀರು ಅಲುಗಾಡದೆ ಇದ್ದೀತೆ? ಒಳಗೆ ಹೇಗಿದೆಯೋ ತಿಳಿಯದು. ಇನ್ನೇನು "ಏಕಾದಶಿ, ಪೂರ್ಣಿಮೇ, ಅಮಾವಾಸ್ಯೆ" ಚಂದ್ರನ ಉದಯ ಆಯಿತು. ಸಮುದ್ರ ಹಾಲು ಉಕ್ಕಿದಂತೆ ಉಕ್ಕುತ್ತದೆ. ಬರಬರುತ್ತಾ ಅಲೆಗಳ ರಭಸವೂ ಹೆಚ್ಚು. ಮನಸ್ಸನ್ನು ಹೇಗೆ ತಲ್ಲಣಿಸುತ್ತೆ! ಹಾಗೆಯೇ ಈ ಸಮುದ್ರ, ಒರಟು ಅಲೆಗಳಿಂದ ತಲ್ಲಣಿಸುತ್ತದೆ. ಒಂದೇ ಪರಿಣಾಮ ಎರಡರ ಮೇಲೆ. 'ಮನೋ ಕಾರಕ' ಚಂದ್ರ, 'ಜಲಕಾರಕ'ನೂ ಹೌದು.

ಕಣ್ಣಿಗೂ ತಂಪು. ಮನಸ್ಸಿಗೂ ತಂಪು. ಸೂರ್ಯನಿಗೆ "ತೀಕ್ಷ್ಣ ರಶ್ಮಿ" ಎಂದು ಕರೆದರು. ಆದರೆ ಚಂದ್ರನನ್ನು 'ಶೀತಕರಣ' ಅಂದರು. ಅವನ ಬೆಳಕು ಹಾಲಿನಂತೆ ಬೆಳ್ಳಗಿರುತ್ತದೆ. ಆದಕ್ಕೇ 'ಅಮೃತ ಕಿರಣ' ಅಂದರು.

### ಪುಷ್ಟಿಕಾರಕ – ತುಷ್ಟಿಕಾರಕ

ಹೂವಿನ ಗಿಡವಿದೆ. ಪ್ರತಿದಿನ ಮಾಲಿ ನೀರು ಹಾಕುತ್ತಾನೆ. ಇಲ್ಲದಿದ್ದರೆ ಗಿಡ ಬಿಸಲಿಗೆ ಒಣಗುತ್ತದೆ ನೀರು ಹಾಕಿದರೆ ಗಿಡ ಬೆಳೆಯುತ್ತದೆ. ಅಂದವಾಗಿ ಹೂ ಬಿಡುತ್ತದೆ. ಗಿಡದ ಪೋಷಣೆ ಆಗಬೇಕು. ನೀರು ಹಾಕಬೇಕು, ನೀರು ಪುಷ್ಟಿಕಾರಕ, ಅಂತೆಯೇ ಜಲಗ್ರಹವಾದ ಚಂದ್ರನೂ "ಪುಷ್ಟಿ ಕಾರಕ"ನಾದನು. ಸಮಸ್ತ ರಸಗಳೂ ನೀರಿನಂದಹವು. ಈ "ರಸ"ಕಾರಕನೂ ಈ ಚಂದ್ರನೇ !

ಹಸಿವು, ಬಳಲಿಗೆ, ಬಾಯಾರಿಗೆ. ನೀರು ಕುಡಿದರೆ ತೃಪ್ತಿ. ತೃಷ್ಟಿ. ಆದ್ದರಿಂದ ಚಂದ್ರನು 'ತುಷ್ಟಿ' ಕಾರಕ. ತೃಪ್ತಿಯನ್ನು ಕೊಡುವವನೂ ಅವನೇ!

ತೃಪ್ತಿ ಆಗಬೇಕು. ಯಾರನ್ನಾದರೂ ತೃಪ್ತಿ ಪಡಿಸಬೇಕು. ಉಪಚಾರ ಮಾಡಬೇಕು.ಅದರಿಂದ ತೃಪ್ತಿ. ಈ ಉಪಚಾರ ಕ್ರಮಗಳನ್ನೂ ಸಹ ತಿಥಿಗಳಂತೆ ಹದಿನಾರು ಭಾಗ ಮಾಡಿದರು. 'ಷೋಡಶೋಪಚಾರ' ಎಂದರು. 1) ಪಾದ್ಯ, 2) ಅರ್ಘ್ಯ, 3) ಅಭಿಷೇಕ .................. ಇತ್ಯಾದಿ ಸ್ತೋತ್ರ ಮಾಡಿ

ಶರಣಾಗತಿ ಹದಿನಾರನೆಯದು.

ಕಾಲು ತೊಳೆಯುವುದರಿಂದ ಹಿಡಿದು ಊಟ ಉಪಚಾರಾದಿಗಳನ್ನು ಕೂಡಿ ಮಾಡಿ ಶರಣಾರಗತಿಯನ್ನೂ ಸಹ ಮಾಡುವುದು – ಇದು ಅತಿಥಿ ಸತ್ಕಾರ, ಉಪಚಾರ. ಇದು ಭಾರತೀಯ ಸಂಸ್ಕೃತಿಯ ಸಾಕ್ಷಿ. ಶೋಡಶೋಪಚಾರ ನಮ್ಮ ಹೃದಯದ ನೈಜ ಸುಹೃತ್ ಭಾವದ ಪ್ರತೀಕ. ಅದನ್ನು ದುರುಪಯೋಗ ಪಡಿಸಿಕೊಂಡವರು ಭಾರತದ ಶತ್ರುಗಳು. ಆದ್ದರಿಂದ ಲಾಭಪಡೆದವರೂ ಶತ್ರುಗಳೇ!

### ಪೋಷಕ ತತ್ವ – ಮಾತೃ ಕಾರಕ

ಭೂಮಿಯಲ್ಲಿ ಬೀಜಗಳನ್ನು ಬಿತ್ತುತ್ತಾರೆ. ಮಳೆಗಾಗಿ ಕಾಯುತ್ತಾರೆ. ಯಂತ್ರಗಳ ಮೂಲಕ ಭಾವಿಯ ನೀರನ್ನು ಹಾಯಿಸುತ್ತಾರೆ. ಬೀಜವು ಮೊಳಕೆಯಾಗಿ ಪೈರಾಗಿ ಭತ್ತ ಅಥವ ರಾಗಿಯಾಗುತ್ತದೆ. ಯಾವ ಬೀಜ ಹಾಕಿರುತ್ತೆ ಆ ರೀತಿ ಗಿಡ ಬೆಳೆಯುತ್ತದೆ. ಕೇವಲ ನೀರಿನಿಂದ ಬೆಳೆಯುತ್ತದೆ. ಈ ಬೆಳೆಸುವ ಶಕ್ತಿ ನೀರಿಗಿದೆ. ಚಂದ್ರನು 'ಜಲಕಾರಕ'. ಈ ಶಕ್ತಿ ಚಂದ್ರನಿಗಿದೆ. ಅಂತೆಯೇ ಮಗುವಿಗೆ ಆದರ ತಾಯಿ. ಆದುದರಿಂದ ಚಂದ್ರನು ಮಾತೃಕಾರಕನಾದನು. ತಾಯಿ ಮಗುವನ್ನು ಬೆಳೆಸಿ ದೊಡ್ಡವನನ್ನಾಗಿ ಮಾಡುತ್ತಾಳೆ.

ಚಂದ್ರನು ತನ್ನ ಬೆಳಕನ್ನು ಸೂರ್ಯನಿಂದ ಪಡೆಯುತ್ತಾನೆ. ಸೂರ್ಯನ ಬೆಳಕು ಕನ್ನಡಿಯಂತೆ ಚಂದ್ರನ ಮೂಲಕ ಪ್ರತಿ ಬಿಂಬಿತವಾಗುತ್ತದೆ. ಅಂತೆಯೇ ಚಂದ್ರನ ವಿಶಿಷ್ಟ ಶಕ್ತಿ. ಸೂರ್ಯನಿಂದ ಬಂದದ್ದು. ಆದ್ದರಿಂದ ಸೂರ್ಯನು 'ಪಿತೃಕಾರಕ'ನಾದನು. 'ರವಿ' ಮತ್ತು 'ಚಂದ್ರ', ಇವರಿಬ್ಬರೂ ತಂದೆ ತಾಯಿಗಳು. ಈ ಲೋಕದ ವಿಶಿಷ್ಟ ಜನಗಳಿಗೂ ತಂದೆ ತಾಯಿಗಳು ಯಾರು ? ಜಗಜ್ಜನನಿ ಪಾರ್ವತಿ ಮತ್ತು ಜಗತ್ಪಿತೃ ಈಶ್ವರನು. ಈ ಎರಡು ಗ್ರಹಗಳೂ ಪಾರ್ವತಿ, ಈಶ್ವರನನ್ನು ತೋರಿಸುತ್ತವೆ. ಇವೆರಡರ ಮಧ್ಯೆ ಜಗತ್ತು. ಜಗತ್ತು ಇವರೀರ್ವರ ಮಗು.

ರವಿ ಚಂದ್ರರ ಸಂಬಂಧ ಮಾತಾಡುವ ಈ ಜ್ಯೋತಿಷ್ಯಕ್ಕೂ ಇವರೇ ಅಭಿಮಾನಿ ದೇವತೆಗಳು. ಜ್ಯೋತಿಷ್ಯ ಶಾಸ್ತ್ರವನ್ನು ಪಾರ್ವತೀ ಈಶ್ವರ ಸಂವಾದದಲ್ಲಿ ಬರೆದಿರುತ್ತಾರೆ. ಈ ಎರಡು ಗ್ರಹಗಳಿಂದ ಈ ಶಾಸ್ತ್ರದಲ್ಲಿ ಎಲ್ಲ ವಿಷಯಗಳ ಅರಿವು. ಆದುದರಿಂದ ಈ ಎರಡು ಗ್ರಹಗಳನ್ನೂ ಕಾಲ ಪುರುಷನ ಕಣ್ಣುಗಳು ಅಂದರು. ಅಂತೆಯೇ ಪ್ರತಿಯೊಬ್ಬರ ದೃಷ್ಟಿ, ನೇತ್ರಗಳನ್ನು ಈ ಎರಡು ಗ್ರಹಗಳು ತೋರಿಸುತ್ತವೆ. ಆದುದರಿಂದ ಇವುಗಳಿಗೆ 'ನೇತ್ರಕಾರಕ' ಅಂದರು.

ಆಕಾಶದಲ್ಲಿ ಈ ಎರಡು ಗ್ರಹಗಳೂ ರತ್ನಗಳಂತೆ ಹೊಳೆಯುವುವು. ಈ ಕಾರಣ ಇವೆರಡೂ 'ದ್ಯುಮಣಿ' ಎಂದರೆ ಆಕಾಶದ ರತ್ನಗಳು ಎಂದರು.

---

# 7

## 'ಪ್ರಶ್ನೆ'– ಪೃಚ್ಛಕ

ಚಂದವಾಗಿದಾನೆ, ಚಂದ್ರ, ಪೂರ್ಣಚಂದ್ರ ಇನ್ನು ಅಂದ. ಕವಿಗಳು ವಿಧವಿಧವಾಗಿ ಬಣ್ಣಿಸಿದ್ದಾರೆ. ಸ್ತ್ರೀಯ ಮುಖವನ್ನು ಇವನಿಗೆ ಹೋಲಿಸಿದರು. ಬೆಳದಿಂಗಳು ಹಾಲಿನಂದಹುದು. ಹಾಲು ಚೆಲ್ಲಿದರೆ ಹೇಗೋ ಹಾಗೆ ಸ್ವಚ್ಛ. ಚಂದ್ರನನ್ನೇ ನೋಡಬೇಕು. ಆ ಚಂದ್ರನಲ್ಲೂ ಕಪ್ಪು ಕಲೆಗಳು. ಮೊಲದಂತೆ ಛಾಯೆಕಾಣುತ್ತದೆ. ಶಶಧರ ಅಂದರು. 'ಶಶ' ಅಂದರೆ ಮೊಲ ಎಂದರ್ಥ. ಇದೇನು ಸೋಜಿಗ ? ಅಂದವಾದ ಚಂದ್ರನಲ್ಲಿ ಕಪ್ಪು ಕಲೆ, ಕಳಂಕ ?

ಅಂತೆಯೇ ಸಮುದ್ರ ಅಗಾಧವಾದುದು. ಅಲ್ಲಿಕೂಡ ನೀರಿನಲ್ಲಿ ಮೊಸಳೆಗಳು, ತಿಮಿಂಗಲಗಳು. ಹೆಸರು ಗೊತ್ತಿರುವ ಪ್ರಾಣಿಗಳು, ಹೆಸರು ಗೊತ್ತಿಲ್ಲದ ಪ್ರಾಣಿಗಳು, ಮುಳುಗಿದರೆ ತಕ್ಷಣವೇ ನುಂಗಿ ಸಾಯಿಸುವ ಕೊಲೆಪಾತಕ ಪ್ರಾಣಿಗಳು. ಇವೆಲ್ಲದಕ್ಕೂ ಸಮುದ್ರವೇ ಆಶ್ರಯ. ಆದರೂ ಮೇಲೆ ನೋಡಲು ಗಹನ, ಗಂಭೀರ.

ಮನಸ್ಸೂ ಕೂಡ ಸಮುದ್ರದ ಹಾಗೆ, ಚಂದ್ರನ ಹಾಗೆ. ಮನಸ್ಸಿನಲ್ಲಿ ಶಾಂತಿ, ಪ್ರಸನ್ನತೆ ಅಪರೂಪ. ಒಳಗಡೆ ಮಹಾ ಸಮುದ್ರವನ್ನು ಅಲ್ಲಕಲ್ಲೋಲ

ಮಾಡುವ ತಿಮಿಂಗಲಗಳು. ಮನಸ್ಸಿನಲ್ಲಿ ಕುಂದು, ಕಳಂಕಗಳು ಇದ್ದೇ ಇರುತ್ತದೆ. ಮನಸ್ಸು ಈ ವಿಕಾರಗಳಿಗೆ ಆಶ್ರಯ. ಚಂದ್ರನಲ್ಲಿ ' ಶಶಿಕಲೆ' ಹೇಗೋ ಹಾಗೆ ಮನಸ್ಸಿನಲ್ಲಿಯೂ ಕಳಂಕ, ಅಶಾಂತಿ, ಉದ್ವೇಗ. ಮೇಲೆ ಕ್ಷಣಿಕವಾದ ಉಲ್ಲಾಸ, ಹರ್ಷ, ಉದ್ವೇಗ.

ಸಮುದ್ರದ ಆಳವನ್ನು ಅಳೆಯುವವನಾರು? ಸಾಧ್ಯವೇ ? ಚಂದ್ರಿಕೆ ಅಂದರೆ ಬೆಳದಿಂಗಳಿನ ಆನಂದವನ್ನು ಅಳೆಯುವುದು ಹೇಗೆ ? ಅಂತೆಯೇ ಮನಸ್ಸಿನ ಆಳವನ್ನು ಅರಿಯುವುದು. ಹೆಣ್ಣಿನ ಅಂತರಂಗವೂ ಆಳತೆಗೆ ಸಿಗಲಾರದು.

ಇದಕ್ಕೆ ಉಪಾಯ? ಅಪಾಯ ತಿಳಿಯದೆ ಉಪಾಯ ಎಲ್ಲಿ ? ಚಂದ್ರನು ಮನಸ್ಸಿನ ಕಾರಕ. ಉದ್ವೇಗ, ಉಲ್ಲಾಸಗಳನ್ನು ಶಾಂತಿ ದುಗುಡಗಳನ್ನು ಮನಸ್ಸಿನ ಅಂತರಾಳದ ಸ್ವರೂಪಗಳನ್ನು ಯಾರು ತೋರಿಸಲು ಸಾಧ್ಯ? ಚಂದ್ರನೇ! ಮತ್ತೆ ಯಾರು?

ಜ್ಯೋತಿಷ್ಯದಲ್ಲಿ ಈ ಚಂದ್ರನು ಬಹಳ ಪ್ರಮುಖ ಗ್ರಹ. ಇವನ ಸ್ವರೂಪ, ಸ್ಥಿತಿಗಳು ಮನಸ್ಸಿನ ಪ್ರತಿಬಿಂಬ. ಮನಸ್ಸನ್ನು ಅರಿಯಲು ಚಂದ್ರನ ತಿಳಿವಳಿಕೆ ಅಗತ್ಯ. ಮನಸ್ಸಿನಲ್ಲಿ ಏನೇ ಹುಟ್ಟಲಿ, ಅದು ಯೋಚನೆಯ ಬಿಂದು. ಆ ಯೋಚನೆಗೆ ಪರಿಹಾರ ಕೇಳುವುದೇ 'ಪ್ರಶ್ನೆ'. ಈ ಪ್ರಶ್ನೆ ಕೇಳುವವನೇ ಪೃಚ್ಛಕ. ಪ್ರಶ್ನೆಯಿಲ್ಲದೆ ಉತ್ತರವಿಲ್ಲ. ಕೇಳುವವರಿಲ್ಲದೆ ಶಾಸ್ತ್ರವಿಲ್ಲ. ಚಂದ್ರನಿಲ್ಲದೆ ಬಯಕೆ ಇಲ್ಲ. ಚಂದ್ರನು ಸರ್ವ ಮನೋಸಾಗರದ ಬಿಂದುಗಳ ಕೇಂದ್ರ. ಸರ್ವ ಶಕ್ತಿ ದೇವತೆಯಾದ ಪಾರ್ವತಿಯು ದೇವತೆಯಾದಳು.

"ವಿದ್ಯಾಮಾಧವೀ" ಗ್ರನ್ಥದಲ್ಲಿ ಮಾಧವಾರ್ಯರು "ಚಾಂದ್ರಂ ಬಲಂ ನಿಖಿಲ ಗ್ರಹ ವೀರ್ಯ ಬೀಜಂ" ಎಂದರು.

---

# 8

## ನಕ್ಷತ್ರಗಳಲ್ಲಿ ಚಂದ್ರ ಸಂಚಾರ

ಹುಟ್ಟಿದ ಕಾಲದಲ್ಲಿ ಗ್ರಹಗಳು ಹನ್ನೆರಡು ರಾಶಿಗಳಲ್ಲಿ ಇರುತ್ತದೆ. ಇದರ ನಕ್ಷೆಗೆ 'ಜಾತಕ' ಎಂದು ಹೆಸರು. ಅಶ್ವನ್ಯಾದಿ ನಕ್ಷತ್ರಗಳಲ್ಲಿ ರವ್ಯಾದಿ ಗ್ರಹಗಳು ಓಡಾಡುತ್ತವೆ. ಜನನ ಕಾಲದಲ್ಲಿ ಯಾವ ನಕ್ಷತ್ರದಲ್ಲಿ ಗ್ರಹಗಳ ಆ ಸ್ಥಿತಿಯ ನಕಾಶೆಯೇ 'ಜಾತಕ'.

ಚಂದ್ರನೂ ಸಹ ಒಂದು ನಕ್ಷತ್ರದಲ್ಲಿರುತ್ತಾನೆ. ಆ ನಕ್ಷತ್ರ ಜನ್ಮ ನಕ್ಷತ್ರ ಆಗುತ್ತೆ. ಇದರ ಫಲ, ಜಾತಕದ ಹುಟ್ಟು ಸ್ವಭಾವ. ಎಲ್ಲ ವೇಳೆಗಳಲ್ಲಿಯೂ ಈ ಗುಣವೇ ಪ್ರಧಾನ. ಇದರಿಂದ ಅವನ ಮನಸ್ಸಿಗೆ ಈ ಗುಣಕ್ಕೆ, ಇತರ ಭಾವನೆಗಳಿಗಿಂತ ಹೆಚ್ಚಿನ ಪ್ರಕಾಶ. ಇಪ್ಪತ್ತೇಳು ನಕ್ಷತ್ರಗಳು, ಅದರ ಫಲ ಚಂದ್ರನ ಫಲ.

**ಅಶ್ವಿನೀ:–**

"ಅಶ್ವ" ಅಂದರೆ ಕುದುರೆ, ಕರದುರೆ ಮುಖದಂತೆ ಈ ನಕ್ಷತ್ರಗಳ ಗುಂಪು. ಈ ನಕ್ಷತ್ರಕ್ಕೆ ಅಧಿದೇವತೆ ಅಶ್ವಿನೀ ದೇವತೆಗಳು ಔಷಧಗಳಲ್ಲಿ ನಿಷ್ಣಾತರು. ಈ ನಕ್ಷತ್ರದಲ್ಲಿ ಔಷದಗಳು ಹುಟ್ಟಿದವು. ಈ ನಕ್ಷತ್ರದಲ್ಲಿ ಹುಟ್ಟಿದವರಿಗೂ ಔಷಧಿಗಳಿಗೂ ನಿಕಟ ಸಂಬಂಧ ಇರುತ್ತೆ. ಯಾವಾಗಲೂ ಔಷಧ ಕುಡಿಯುವುದು, ಕೊಡುವುದು, ಮಾರುವುದು. ಆರೋಗ್ಯದ ವಿಷಯದಲ್ಲಿ ಮುತುವರ್ಜಿ.

ಪಥ್ಯದ ಊಟ, ಸ್ವಲ್ಪವೇ ತಿನ್ನುವುದು. ಊಟದಲ್ಲಿ ಅವಸರ. ಒಂದು ಸಲ ತಿನ್ನುವುದನ್ನು ಹತ್ತು ಸಲ ತಿನ್ನುವುದು. ಸಸ್ಯಗಳು, ಮೂಲಿಕೆಗಳ ಅರಿವು ಬೇರೆ. ಅವಸರದ ಪ್ರಕೃತಿ. ನೋಡುವುದಕ್ಕೆ ಚಂದ. ಅರುಣಗೆಂಪು ಇವರ ಬಣ್ಣ. ಮೂಗಿನ ಮೇಲೆಯೇ ಸಿಟ್ಟು. ಅಷ್ಟೇ ಬೇಗ ಶಾಂತಿ. ಹಠದ ಸ್ವಭಾವ, ಹಿಡಿದ ಪಟ್ಟು ಬಿಡುವುದಿಲ್ಲ. ಆತ್ಮ ಅಭಿಮಾನ ಜಾಸ್ತಿ. ಹೊಗಳುಭಟ್ಟರು ಅಂದರೆ ಪ್ರಿಯ. ಉದಾರ ಮನಸ್ಸು, ಆದರೆ ಚಪಲ ಬುದ್ಧಿ. ಕುದುರೆ ಜೂಜು ಎಂದರೆ ಆಸೆ. ಮನಸ್ಸಿನಲ್ಲಿ ಚಿಂತೆ, ಆಸೆ ಈಡೇರಲು ಹವಣಿಕೆ. ಆಸೆ ದಕ್ಕದು, ಬೇಸರ. ಈ ವಿಚಿತ್ರ ಮನೋಭಾವದವರು.

**ಭರಣೀ :–**

ಉನ್ನತ ಮಟ್ಟಕ್ಕೆ ಬರಬೇಕು, ಇವರಿಗೆ ಈ ಹಂಬಲು. ಆಸೆ ಇರಬೇಕು. ಅದಕ್ಕೂ ಧೈರ್ಯ ಬೇಕು. ಆಸೆಗೆ ಸಾಧನೆ ಅಗತ್ಯ. ತನಗೆ ಸಾಧ್ಯವಿಲ್ಲ. ಆಗ ದೇವರನ್ನು ಪೂಜೆಮಾಡುವ ಉಪಾಯ. ಇವರು ದೇವತಾ ಭಕ್ತರು. ಹಿರಿದಾದ ಆಸೆಯುಳ್ಳವರು. ಇದೇ ಇವರ ಮನೋಭಾವ. ಭಾರಿ ಕೆಲಸಕ್ಕೇ ಕೈ ಹಾಕುವುದು. ಸಣ್ಣಪುಟ್ಟ ಕೆಲಸಗಳ ಚಿಂತೆ ಇವರಿಗೆ ಬೇಡ. ಅಮಾವಾಸ್ಯೆಯ ರಾತ್ರಿ ಈ ನಕ್ಷತ್ರ ರಾಜಯೋಗ ಕೊಡುತ್ತೆ. "ಭರಣಿಯವ ಧರಣಿ ಆಳುವನ್ನೆ" ಎಂದರು. ಇದಕ್ಕೆ ದೇವತೆ ಯಮ.

**ಕೃತ್ತಿಕ :–**

ಕೃತ್ತಿಕಾ ನಕ್ಷತ್ರಕ್ಕೆ ದೇವತೆ 'ಅಗ್ನಿ'. ಇದರಲ್ಲಿ ಹುಟ್ಟಿದವರಿಗೆ ಅಗ್ನಿ ತತ್ವ ಹೆಚ್ಚು. ಹಸಿವೂ ಬಾಯಾರಿಕೆ ಹಠ–ಕೋಪಗಳು ಬೇರೆ. ಆದ್ದರಿಂದಲೇ ಅವರು ಸಾಹಸಿಗಳು. ಸಾಧನೆ ಮಾಡಿ ಜಯಿಸುತ್ತಾರೆ. ತಿನ್ನುವುದೂ, ಅಷ್ಟೆ. ಉಕ್ಕಿನಂತಹ ಶರೀರ. ಬೆಂಕಿಯಂತಹ ಮನಸ್ಸು. ಕೋಪ ಬರುವುದೂ ಬೇಗ, ಶಮನವಾಗುವುದೂ ಬೇಗ.

ಯವುದೇ ವಿಷಯ ಆಗಲಿ, ಒಪ್ಪಿಕೊಳ್ಳುವ ಸ್ವಭಾವವಿಲ್ಲ. ತರ್ಕಮಾಡಿ

ಸರಿತೋರಿದರೇ ಒಪ್ಪುವುದು. ವಿಚಾರ ಶೀಲರು, ಗಾಂಭೀರ್ಯ ಪ್ರಕೃತಿ. ನ್ಯಾಯಾನ್ಯಾಯ ದೃಷ್ಟಿ ಬೇರೆ. ಕ್ರಮದ ಜೀವನದಿಂದ ಶೀಘ್ರ ಜಯಶಾಲಿಗಳು. ಅಕಾಲ ಭೋಜನ. ದೇಶಾಟನೆ, ದೇಶಪ್ರೇಮ, ಇವರ ವಿಶೇಷ ಗುಣಗಳು.

**ರೋಹಿಣಿ :–**

ಈ ನಕ್ಷತ್ರದ ದೇವತೆ ಬ್ರಹ್ಮ. ಈ ನಕ್ಷತ್ರದಲ್ಲಿ ಭಗವಾನ್ ಶ್ರೀ ಕೃಷ್ಣ ಭೀಮರು ಹುಟ್ಟಿದರು. ಬ್ರಹ್ಮನು ಸೃಷ್ಟಿ ಕರ್ತನು. ಇದರಲ್ಲಿ ಹುಟ್ಟಿದವರು ಹುಟ್ಟು, ಜೀವನ ಸಾವು ಈ ಮೂರು ರಹಸ್ಯಗಳನ್ನು ಚಿಂತಿಸುವವರು. ಆತ್ಮ ಜ್ಞಾನಕ್ಕೆ ಹಾತೊರೆಯುವವರು. ವೇದ ನೀತಿಗಳಲ್ಲಿ ಆಸಕ್ತಿ. ಜ್ಞಾನಾರ್ಜನೆ ಇವರ ಮುಖ್ಯ ಹವ್ಯಾಸ. ಸತ್ಕರ್ಮ ಮಾಡುವುದು ಇವರಿಗೆ ಪ್ರೀತಿ. ಹಿಂದಿನ ಕಾಲದ ಸಂಸ್ಕೃತಿ ಎಂದರೆ ಗೌರವ. ಆತ್ಮ ಉದ್ಧಾರಕ್ಕಾಗಿ ದುಡಿಯುತ್ತಾರೆ. ವಿದ್ಯೆಗಾಗಿ ಶ್ರಮ ಬೀಳುತ್ತಾರೆ. ಆದರೆ ಚಪಲ ಚಿತ್ತರು. ಹೊಗಳಿಕೆಗೆ ಮರುಳಾಗುತ್ತಾರೆ.

**ಮೃಗಶಿರ :–**

ಚಂದ್ರನು ಈ ನಕ್ಷತ್ರದ ಅಭಿಮಾನಿ ದೇವತೆ. ಈ ನಕ್ಷತ್ರದಲ್ಲಿ ಸ್ವಭಾವ ಮೃದು ಮತ್ತು ಕೋಮಲ. ತಾಯಿಯ ಸೇವೆ, ಪ್ರೀತಿಯ ಮಾತಿ. ಇವರ ವಿಶೇಷ. ಸಂಚಾರ ಇವರಿಗೆ ಪ್ರಿಯ. ಸ್ತ್ರೀ ಸಂಗವೆಂದರೆ ಆಸೆ. ಅರ್ಥವತ್ತಾದ ಮಾತು. ರಸವತ್ತಾದ ಭಾವ. ಅತಿಥಿಗಳಲ್ಲಿ ಆದರ, ತಮ್ಮ ಕೆಲಸಗಳನ್ನಾದರೂ ಬಿಟ್ಟು ಇನ್ನೊಬ್ಬರ ಶ್ರೇಯಸ್ಸಿಗಾಗಿ ದುಡಿಯುತ್ತಾರೆ.

**ಆರುದ್ರಾ :–**

ಈಶ್ವರನಿಗೆ ಪ್ರಿಯ ಈ ನಕ್ಷತ್ರ. ಇದರಲ್ಲಿ ಶಿವನಿಗೆ ಅಭಿಷೇಕ ಮಾಡಿಸಿದರೆ ಕ್ಷಿಪ್ರವಾಗಿ ಒಲಿಯತ್ತಾನಂತೆ! ರುದ್ರ ನಕ್ಷತ್ರ ಎಂದೂ ಒಂದು ಹೆಸರು. ಈಶ್ವರನಷ್ಟೇ ಕೋಪ, ಪ್ರಪಂಚವನ್ನು ಸುಡುವ ಕೋಪ. ಸರ್ವ ಲೋಕಗಳಿಗೆ ಈಶ್ವರ ಈ ವಿಶ್ವೇಶ್ವರ. ಆದರೂ ಅವನಿಗೆ ಭಿಕ್ಷಾಪಾತ್ರೆ ತಪ್ಪಲಿಲ್ಲ!

ಐಶ್ವರ್ಯಾದಿಗಳು ಇದ್ದರೂ ಈ ಜನರಿಗೆ ದರಿದ್ರ. ದೇಹದಲ್ಲಿ ಉಷ್ಣಾಂಶ ಜಾಸ್ತಿ, ಹಸಿವು ಬಾಯಾರಿಕೆ ಹೆಚ್ಚು, ಕ್ರೂರ ಸ್ವಭಾವ, ದಯೆ ಬಂದರೆ ಎಲ್ಲವನ್ನೂ ಕೊಟ್ಟುಬಿಡುತ್ತಾರೆ. ಇಲ್ಲ ಅಷ್ಟೇ ನಿರ್ದಯೆ! ಯುದ್ಧಮಾಡುವ ಸ್ವಭಾವ. ಈ ನಕ್ಷತ್ರದಲ್ಲಿ ಕೆಟ್ಟ ಗ್ರಹಗಳಿದ್ದರೆ ಆ ಕಾಲದಲ್ಲಿ ಯುದ್ಧಗಳಾಗುತ್ತವೆ. ಜಗಳ ಆಡುವ ಸ್ವಭಾವ. ವಿವೇಕ ಇವರಿಂದ ಬಹಳ ದೂರ.

**ಪುನರ್ವಸು :–**

ಸರ್ವದೇವತೆಗಳಿಗೂ ತಾಯಿ ಆದಿತಿ. ಈಕೆ ಈ ನಕ್ಷತ್ರದ ದೇವತೆ. ಈ ನಕ್ಷತ್ರದಲ್ಲಿ ಹುಟ್ಟಿದವರಿಗೆ ದೇವತಾ ಭಕ್ತಿ ಸ್ವಾಭಾವಿಕ. ವಿಷ್ಣು ಆರಾದಕರು. ಶ್ರದ್ಧಾ ಭಕ್ತಿಗಳು ಹೆಚ್ಚು. ಗುಣಶೀಲರು, ರೂಪವಂತರು, ಧೀರ್ಘ ಆಲೋಚನಾಪರರು. ಸರ್ವರಿಗೂ ಹಿತ ಕೋರುವವರು.

ಧರ್ಮ ಶಾಸ್ತ್ರಗಳಲ್ಲಿ ಅಭಿಮಾನ ಹೆಚ್ಚು. ಸುಖದ ತವರು ಮನೆ ಸ್ವರ್ಗ. ಆ ಸ್ವರ್ಗ ಸುಖ ಈ ಲೋಕದಲ್ಲಿ ಅನುಭವಿಸಬೇಕು. ಈ ಹಂಬಲು, ಸುಖಜೀವಿಗಳು. ಇಲ್ಲಿ ಶ್ರೀರಾಮದೇವರ ಜನನ. ಅವನಂತೆ ಇವರಿಗೂ ಪಿತೃಪ್ರೇಮ, ಸ್ತ್ರೀ ಚಿಂತೆ. ಕೀರ್ತಿಗಾಗಿ ಎಷ್ಟು ಕೆಲಸವಾದರೂ ಮಾಡಿ ಜಯಿಸುತ್ತಾರೆ.

**ಪುಷ್ಯ:–**

ದೇವತೆಗಳ ಗುರು ಬೃಹಸ್ಪತಿಯೇ ಇದಕ್ಕೆ ಅಭಿಮಾನಿ ದೇವತೆ. ಇದರಲ್ಲಿ ಹುಟ್ಟಿದವರು ಜ್ಞಾನ, ಕರ್ಮಶೀಲರು. ದೇವತೆಗಳ ಆರಾದನೆಯಿಂದ ಧನವಾಹನಾದಿಗಳ ಅರ್ಜನೆ ಆದೀತು. ವಿವೇಕ ಇವರ ವಿಶೇಷ. ಅರ್ಥ ಪೂರ್ಣ ಮಾತಿನಿಂದ ಇವರಿಗೆ ಹರ್ಷ. ಶಾಂತ ಸ್ವಭಾವದವರು. ತ್ಯಾಗ ಬುದ್ಧಿ ಹುಟ್ಟುಗುಣ. ಶ್ರೀರಾಮನ ತಮ್ಮ ಭರತನು ಇದರಲ್ಲಿ ಹುಟ್ಟಿದವನು. ಇವರಿಗೆ ಅಣ್ಣನಲ್ಲಿ ಪ್ರೇಮ ಹೆಚ್ಚು. ಗುರು ಸೇವಾಪರರು.

ಆಶ್ಲೇಷಾ :–

ಸರ್ಪ ಈ ನಕ್ಷತ್ರಕ್ಕೆ ಅಧಿಪತಿ. ಶ್ರೀರಾಮನ ಜೊತೆ ವನವಾಸ ಮಾಡಿದ ಲಕ್ಷ್ಮಣನು ಈ ನಕ್ಷತ್ರದಲ್ಲಿ ಹುಟ್ಟಿದವನು. ಸರ್ಪದಂತೆ ದ್ವೇಷ ಸಾಧನೆ ಮಾಡುವ ಮನೋಭಾವ. ಕ್ರೂರಸ್ವಭಾವ, ಹಠವಾದಿಗಳು. ಎಷ್ಟು ಕಷ್ಟಗಳನ್ನಾದರೂ ಸಹಿಸುವವರು. ಮತ್ತೊಬ್ಬರ ಆಶ್ರಯದಲ್ಲಿ ಬೆಳೆಯುವವರು. ವಿಷಪೂರಿತ ಮನಸ್ಸು, ಅಶಾಂತಿಗೆ ಇವರ ಮನಸ್ಸು ತವರುಮನೆ. ಕಳ್ಳಕಾಕರಿಂದ ಭಯ. ಸರ್ಪ ಪೂಜೆ ಇವರಿಗೆ ಪ್ರಿಯ.

ಮಖಾ:–

ಪಿತೃದೇವತೆ ಈ ನಕ್ಷತ್ರದ ಅಭಿಮಾನಿ. ಇದರಲ್ಲಿ ಹುಟ್ಟಿದವರಿಗೆ ಪಿತೃಭಕ್ತಿ ಸಹಜ ಗುಣ. ಪಿತೃಸೇವೆ, ಪೂರ್ವಾಚಾರ ನಡೆಸಿಕೊಳ್ಳುವುದರಲ್ಲಿ ಸಾಹಸ ಮಾಡುತ್ತಾರೆ. ಬಂಧುಗಳಲ್ಲಿ ಪ್ರೇಮ, ಅತಿಥಿ ಸತ್ಕಾರ, ದಾನ ಧರ್ಮಗಳಲ್ಲಿ ಶ್ರದ್ದೆ ಇವರ ಗುಣಗಳು. ತಮ್ಮ ಮನಸ್ಸು ಇತರರ ಮೇಲೆ ಪ್ರಭಾವ ಬೀರುವಂತೆ ಮಾಡುತ್ತಾರೆ. ಈ ಚಾಕಚಕ್ಯತೆ ಇವರಲ್ಲಿದೆ.

ಪೂರ್ವ ಫಲ್ಗುನೀ :–

ಆರ್ಯಮಾ ದೇವತೆ ಇದರ ಅಭಿಮಾನಿ. ಈ ನಕ್ಷತ್ರದಲ್ಲಿ ಹುಟ್ಟಿದರೆ ಲಲಿತ ಕಲೆಗಳಲ್ಲಿ ಅಭಿರುಚಿ ಹೆಚ್ಚು. ನಾಟ್ಯ ಗೀತೆಗಳಲ್ಲಿ ಆಸಕ್ತಿ, ರಾಜನಲ್ಲಿ ಪ್ರೇಮ. ಅಲಂಕಾರದಲ್ಲಿ ಇಷ್ಟ. ರೂಪವಂತರು. ಸುಂದರಿಯರಲ್ಲಿ ಆಸಕ್ತಿ. ದಾನ ಧರ್ಮಗಳಲ್ಲಿ ನಂಬಿಕೆ ಇರುತ್ತದೆ. ಪಂಡಿತರಿಂದ ಆದರ ಪ್ರೇಮಗಳನ್ನು ಹೊಂದುತ್ತಾರೆ.

ಉತ್ತರ ಫಲ್ಗುನೀ :–

ಭಗದೇವತೆ ಇದಕ್ಕೆ ಅಭಿಮಾನಿ. ಕಲಾವಂತರು, ಸ್ತ್ರೀಯರಿಗೆ ಪ್ರಿಯರು, ವಿನಯ ವಿದ್ಯಾಸಂಪನ್ನರು. ಎಲ್ಲರಿಗೂ ಬೇಕಾದವರು. ಧನ ಧಾನ್ಯಾದಿಗಳಿಂದ

ಕೂಡಿ ದಾನ ಮನೋಭಾವವಿರುತ್ತೆ. ರಾಜ್ಯಾಧಿಕಾರಿಗಳು ಇವರನ್ನು ಪ್ರೀತಿಮಾಡುತ್ತಾರೆ.

**ಹಸ್ತಾ :–**

ಸೂರ್ಯನು ಇದರ ದೇವತೆ. ಇವರು ವಿದ್ಯೆ ಕಲಿಯುವುದರಲ್ಲಿ ನಿಷ್ಠಾವಂತರು. ಪರರಿಗೆ ಉಪಕಾರ ಮಾಡುತ್ತಾರೆ. ಧನ ಬಲವಿರುತ್ತೆ. ಸರ್ವರಲ್ಲಿ ಕೀರ್ತಿ ಪಡೆಯಲು ಸಾಹಸ ಮಾಡುತ್ತಾರೆ, ಜನಗಳಿಂದ ಯಜಮಾನ್ಯವನ್ನು ಪಡೆಯುತ್ತಾರೆ.

**ಚಿತ್ತಾ :–**

ಇಂದ್ರನಿಗೆ ಕೆಲಕಾಲ ಗುರುವಾಗಿದ್ದ ತ್ವಾಷ್ಟ್ರ ಇದಕ್ಕೆ ದೇವತೆ. ಇದರಲ್ಲಿ ಹುಟ್ಟಿದವರು ಸಾಹಸಿಗಳು. ಶತ್ರುಗಳನ್ನು ಸದೆಬಡಿಯುವವರು. ತರ್ಕಶಾಸ್ತ್ರ ಪಂಡಿತರು. ರೂಪ ಕಲಾಶೀಲರು. ಕಾಮಶಾಸ್ತ್ರದಲ್ಲಿ ನುರಿತವರು. ತೇಜಸ್ಸು ಮತ್ತು ಐಶ್ವರ್ಯದಿಂದ ಕೂಡಿದವರು.

**ಸ್ವಾತೀ :–**

ಈ ನಕ್ಷತ್ರದ ದೇವತೆ ವಾಯುದೇವರು. ವಾಯುವಿನಂತೆ ಶೀಘ್ರವಾಗಿ ನಡೆಯುತ್ತಾರೆ. ನೋಡಲು ಅಂದವುಳ್ಳವರು. 'ಲಾಭ' ಸಂಪಾದನೆ ಮಾಡುತ್ತಾರೆ. ಸ್ತ್ರೀ ಸಂಗ ಪ್ರಿಯರು. ಹೆಂಗಸರ ಮಾತು ಇವರಿಗೆ ಆಣತಿ. ಶಿಲ್ಪ ಶಾಸ್ತ್ರ ತಿಳಿದವರು. ಸಾಧು ಸಂಗ ಪ್ರಿಯರು. ವಿದ್ಯಾವಂತರು ಪಂಡಿತರೂ ಹೌದು. ವೈದ್ಯ ವಿದ್ಯೆ ಇವರಿಗೆ ಪ್ರಿಯ .

**ವಿಶಾಖ:–**

ಅಭಿಮಾನಿ ದೇವತೆಗಳು ಇಂದ್ರ, ಅಗ್ನಿ, ಅಥವಾ ಶೂರ್ಪ ದೇವತೆ. ಮೊನಚಾದ ಆಯುಧಗಳೂ, ಅವುದಳನ್ನು ತಯಾರು ಮಾಡುವುದನ್ನು ತಿಳಿದವರು. ಕುಶಾಗ್ರ ಬುದ್ದಿ. ಭಕ್ತಿ ಎಂದರೆ ಶಕ್ತಿ ಎನ್ನುವ ನಂಬಿಕೆ. ಸೇವಕರನ್ನು ವಶಮಾಡಿಕೊಳ್ಳುವವರು. ನೀಚ ಜನಗಳ ಸ್ನೇಹ ಪ್ರಿಯರು. ಅಗ್ನಿಯಿಂದ

ಆಗುವ ಕೆಲಸಗಳಲ್ಲಿ ಕೀರ್ತಿ ಪಡೆಯುವರು.

ಅನೂರಾಧ :–

ಈ ನಕ್ಷತ್ರ ದೇವತೆ 'ಮಿತ್ರ'ನು. ಮೈತ್ರಿಯನ್ನು ಅಭಿವೃದ್ಧಿ ಮಾಡುವವರು. ಇದಕ್ಕೆ ಬೇಕಾಗುವ ಗುಣಗಳು ಸಹಜವಾಗಿ ಇವರಲ್ಲಿರುತ್ತವೆ. ವೈರ ಮಾಡುವುದು, ಹಗೆಗಳಲ್ಲಿ ಸುಳಿದಾಟ, ಶತ್ರುಪೀಡೆ ಇವುಗಳ ಬಾಧೆ ಇವರಿಗಿಲ್ಲ. ಎಲ್ಲರಲ್ಲಿಯೂ ಮಿತ್ರರಾಗಿರುತ್ತಾರೆ. ಲಲಿತಕಲೆ ಸಂಗೀತ, ಗಾನವಿದ್ಯೆಗಳಲ್ಲಿ ಅಭಿರುಚಿ, ಅನ್ಯರಲ್ಲಿ ಅನುರಾಗವಿದ್ದು ಸಂಬಂಧ ರಂಜನೆಗೆ ಅವಕಾಶ ಉಂಟು. ಸಂತೋಷ ಮನಸ್ಸಿನಿಂದ ಕೂಡಿ ಎಲ್ಲರಿಗೂ ಪ್ರಿಯರಾಗುವರು. ಮಾತೃ ಭಕ್ತಿ, ತಾಯಿಯ ಹಿತ, ಇವೆರಡೂ ಇವರಿಗೆ ಪ್ರೀತಿಕರ ಕಾರ್ಯಗಳು.

ಜ್ಯೇಷ್ಠಾ :–

ದೇವೇಂದ್ರನು ಈ ನಕ್ಷತ್ರದ ದೇವತೆ ದೇವೇಂದ್ರ ಸ್ವರ್ಗ ಲೋಕದ ರಾಜನು. ಇದರಲ್ಲಿ ಹುಟ್ಟಿದವರು ಸುಖವಾಗಿ ಅಧಿಕಾರ ಮಾಡಬೇಕು ಎಂದೇ ಆಸೆ. ಕಾಮ ಚೇಷ್ಟೆ ಜಾಸ್ತಿ. ಮಕ್ಕಳು ಕಡಿಮೆ. ಇನ್ನೊಬ್ಬರ ಪ್ರತಾಪ ಇವರಿಗೆ ಸಹಿಸದು. ವಿಷ್ಣು ಆರಾಧನೆಯಿಂದ ಕಾರ್ಯಸಾಧನೆ ಮಾಡಿಕೊಳ್ಳುವರು. ಸ್ತ್ರೀ ಪ್ರೇಮ ಇವರ ಭಾಗ್ಯ. ಸಂಗೀತ ಮತ್ತು ನೃತ್ಯಾದಿ ಲಲಿತ ಕಲೆಗಳಲ್ಲಿಯೂ ಅಭಿರುಚಿ ಇರುತ್ತದೆ.

ಮೂಲಾ :–

'ನಿರುತಿ' ಈ ನಕ್ಷತ್ರಕ್ಕೆ ದೇವತೆ. ಹೆಸರೇ ಹೇಳುವಂತೆ ಮೂಲವನ್ನೇ ಸಾಧನೆಮಾಡುವ ಪ್ರಕೃತಿ ಇವರದು. ಮೂಲದಿಂದ ಜ್ಞಾನಾರ್ಜನೆ ಮಾಡುವುದು, ಮೂಲತತ್ವಗಳ ಜ್ಞಾನದಿಂದ ಇತರ ಜನಗಳಿಂದ ಮರ್ಯಾದೆ ಸಿಗುವುದು ತಮ್ಮ ಎಲ್ಲಾ ಅಭಿವೃದ್ಧಿಗೂ ತಾವೇ ಕಾರಣರು. ಕೀರ್ತಿ, ಪ್ರತಾಪ ಉಳ್ಳವರು, ರಾಜಯೋಗ ಉಳ್ಳವರು. ಹುಟ್ಟಿದ ತಕ್ಷಣ ತಂದೆ ತಾಯಿಗಳಿಗೆ ಗಂಡ. ಶಿಶುವಿಗೂ ಗಂಡ, ತಪ್ಪಿದರೆ ವಿಶೇಷ ಸುಖದಿಂದ ಜೀವನದಲ್ಲಿ ದೇವತ್ವವನ್ನು

ನೋಡುವರು. ಧೈರ್ಯ, ಸಾಹಸಗಳಿಗೆ ತವರು ಮನೆ. ಈ ನಕ್ಷತ್ರದಲ್ಲಿ ಹನುಮಾನ್ ಚಂದ್ರಹಾಸರು ಹುಟ್ಟಿದರು.

**ಪೂರ್ವಾಷಾಢ :–**

ಇದಕ್ಕೆ ಅಬ್ದದೇವತೆ ಅಭಿಮಾನಿಯು. ಇದರಲ್ಲಿ ಹುಟ್ಟಿದವರು ಒಳ್ಳೆಯ ವ್ಯಾಪಾರಶೀಲರು. ಪದೇ ಪದೇ ನೀರು ಕುಡಿಯುವವರು. ಪಾನೀಯ ಅಂದರೆ ಪ್ರೀಯ. ಆನಂದವಾಗಿ ಉಲ್ಲಾಸಕರವಾಗಿ ಮಾತಾಡುವ ಚಾತುರ್ಯ ಉಳ್ಳವರು. ಸಂಪತ್ಕರ ಲಕ್ಷ್ಮೀ ಈ ನಕ್ಷತ್ರದಲ್ಲಿ ವಾಸ. ಧನ ಧಾನ್ಯ ಸಂಪತ್ತು ಅನಾಯಾಸವಾಗಿ ಲಾಭವಾಗುವುದು.

**ಉತ್ತರಾಷಾಡ :–**

ವಿಶ್ವೇದೇವತೆಗಳು ಈ ನಕ್ಷತ್ರಕ್ಕೆ ದೇವತೆ. ಪ್ರಪಂಚಕ್ಕೆ ಅಗತ್ಯ. ಬೇಕಾದ ಕೆಲಸ ಮಾಡುವವರು. ದಾನ ಧರ್ಮ, ಪರೋಪಕಾರ, ದಯಾಗುಣಗಳು ಇವರಿಗೆ ಸಹಜ. ಹೆಂಡತಿಯಲ್ಲಿ ಪ್ರೇಮ ಅಪಾರ. ಹಣ ಸಂಚಯದಲ್ಲಿ ಆಸೆ. ಕೂಡಿಟ್ಟ ಹಣ ಇರುವುದು ಕಷ್ಟ. ಸಾರ್ವತ್ರಿಕವಾಗಿ ಎಲ್ಲವನ್ನು ನೋಡುವುದು.

**ಶ್ರವಣ :–**

ಶ್ರೀಮನ್ನಾರಾಯಣನ ಪ್ರೀತಿಯ ನಕ್ಷತ್ರ. ಶ್ರೀ ಹರಿಯಂತೆ ಸ್ನೇಹ ಪ್ರಿಯನು. ಪುರಾಣ ಪುಣ್ಯಕಥಾಶ್ರವಣಗಳಲ್ಲಿ ಆಸಕ್ತಿ, ಕಲೆಗಳಲ್ಲಿ ಅಭಿಮಾನ. ಪಾಂಡಿತ್ಯಕ್ಕೂ, ಸಂಪತ್ತಿಗೂ ಅಧಿಕಾರಿಯಾಗುತ್ತಾನೆ. ಮಕ್ಕಳು ಜಾಸ್ತಿ. ಜನಗಳ ಉಪಕಾರವನ್ನು ಮರೆಯದೆ ಪ್ರತಿ ಉಪಕಾರ ಮಾಡುವ ಸ್ವಭಾವ. ವಿಷ್ಣು ಆರಾಧನೆಯಲ್ಲಿ ಆಸಕ್ತಿ.

**ಧನಿಷ್ಠಾ :–**

'ವಸುದೇವತೆ' ಇದಕ್ಕೆ ಅಧಿಪತಿ. ಸತ್ಕರ್ಮ ಶೀಲರು, ದೇವತಾ ಗುರುಗಳಲ್ಲಿ ಭಕ್ತಿಯಿಂದ ನಡೆಯವರು. ಜ್ಞಾನಾರ್ಜನೆಯಲ್ಲಿ ಅಮಿತ ಆಸಕ್ತಿ, ಧನಿಕರಾದರೂ ದಯಾವಂತರು. ಕ್ಷಯರೋಗಕ್ಕೆ ಬಹುಬೇಗ ಬಲಿಯಾಗುತ್ತಾರೆ. ಸೌಂದರ್ಯೋಪಾಸಕರು. ಸಂಗೀತ ಪ್ರಿಯರು, ಬುಧಗ್ರಹ ಇದರಲ್ಲಿ ಜನನವಾಯಿತು.

**ಶತಭಿಷಾ :–**

ವರುಣನು ಇದಕ್ಕೆ ದೇವತೆ. ಜನಗಳೂ ಸಹ ವರುಣನಂತೆ ಬಲಿಷ್ಠರು. ಇವರಿಗೆ ಅನ್ಯಸ್ತ್ರೀಯರಲ್ಲಿ ಆಸಕ್ತಿ. ವಿಶೇಷ ವಿಷಯಗಳನ್ನು ತಿಳಿದವರು. ರಹಸ್ಯ ಮನೋಭಾವ ಉಳ್ಳವರು, ಗೀತಜ್ಞರು. ಹಠ ಹೆಚ್ಚು. ಲೋಭ ಇವರಿಗೆ ಬಲೆ.

**ಪೂರ್ವಾಭಾದ್ರ :–**

'ಅಜೈಕಪಾದ'ನು ಇದರ ಅಧಿಪತಿ. ಇದರಲ್ಲಿ ಹುಟ್ಟಿದಾತನು ಜಿತೇಂದ್ರಿಯನು, ಸ್ತ್ರೀಯರಿಗೆ ಪ್ರಿಯನು, ಗಾನ, ನಾಟ್ಯ, ಲಲಿತ ಕಲೆಗಳಲ್ಲಿ ದಕ್ಷನು, ಬ್ರಹ್ಮಜ್ಞಾನ ಉಳ್ಳವನು. ಮೃದುವಾಗಿ ಮಾತಾಡುವವನು. ಸರ್ವಜನ ಪ್ರಿಯನು. ಆದರೆ ತನ್ನದೇ ಹಠ ಸಾಧಿಸತ್ತಾನೆ.

**ಉತ್ತರಾಭಾದ್ರ :–**

'ಅಹಿರ್ಬುಧ್ನ'ನೆಂಬ ರುದ್ರನು ಇದಕ್ಕೆ ಅಧಿಪತಿ. ಉತ್ತಮವಾದ ಮಕ್ಕಳು ಇವರಿಗೆ ಆನಂದ ಕೊಡುವರು. ಜಿತೇಂದ್ರಿಯರು, ಧರ್ಮಶಾಸ್ತ್ರ ತಿಳಿದು ಇತರರಿಗೆ ಭೋಧೆ ಮಾಡುತ್ತಾರೆ. ದೇವಪೂಜಾ ಆಸಕ್ತಿ ಬಹಳ. ಬಿಡದೆ ಜೀವನವೆಲ್ಲಾ ಮೀಸಲಿಡುತ್ತಾರೆ. ಸುಖದಿಂದ ಜೀವಿಸುತ್ತಾರೆ.

**ರೇವತೀ :–**

ಈ ನಕ್ಷತ್ರದ ಅಭಿಮಾನಿ ದೇವತೆ 'ಪೂಷಾ'. ಇದರಲ್ಲಿ ಹುಟ್ಟಿದವರಿಗೆ ಚಂಚಲ ಮನಸ್ಸು. ಧನಿಕರು, ದಾನಿಗಳು, ಸ್ತ್ರೀಯರಲ್ಲಿ ಆಸಕ್ತಿ ಅಪಾರ. ಜ್ಞಾನದಲ್ಲಿ ಆನಂದ ಇವರಿಗೆ. ಶಾಸ್ತ್ರ ಮತ್ತು ಅದರ ಅರ್ಥ ತಿಳಿದು ಸುಖ ಬೀಳುವವರು. ಚಂಚಲ ಕಣ್ಣುಗಳು ಇವರ ರೂಪನ್ನು ಅಭಿವೃದ್ಧಿ ಮಾಡತ್ತದೆ. ನಿರ್ಣಯ ಇವರಿಂದ ಅಸಾಧ್ಯ. ಇದರಲ್ಲಿ ಅಭಿಮನ್ಯು ಹುಟ್ಟಿದ್ದು.

ಇಪ್ಪತ್ತೇಳು ನಕ್ಷತ್ರಗಳಲ್ಲಿ ಚಂದ್ರನು ಓಡುವಾಗ ಹುಟ್ಟಿದವರ ಮನೋಭಾವ, ಗುಣಗಳು ಸ್ಥೂಲವಾಗಿ ಇಷ್ಟು.

( ಆಧಾರಗ್ರನ್ಥ – ಜ್ಯೋತಿಷ್ಯಶಾಸ್ತ್ರ ಪಯೋನಿಧಿ )

# 9

## ಜನ್ಮ ರಾಶಿ ಗುಣಲಕ್ಷಣಗಳು

ಮನಸ್ಸಿನ ಆಳವನ್ನು ತಿಳಿಯಲು ಯಾರಿಂದ ಸಾಧ್ಯ? ದೇವಾದಿಗಳಿಗೂ ಇದು ಒಂದು ಸಮಸ್ಯೆ. ಜ್ಞಾನ ಶಕ್ತಿ ಎಷ್ಟು ಇದ್ದರೆ ಅಷ್ಟು ಗೊತ್ತಾಗುತ್ತದೆ. ನಾನಾ ಮಾರ್ಗಗಳಲ್ಲಿ ಮನಸ್ಸಿನ ಸ್ವಭಾವ ಗುಣಗಳನ್ನು ಅಳೆಯಲು ಶಕ್ತಿಮೀರಿ ಸಾಹಸ ಮಾಡುತ್ತಾರೆ. ಸ್ಥೂಲವಾಗಿ ನಕ್ಷತ್ರಗಳ ವಿಗಡಣೆಯಿಂದ ಸ್ವಲ್ಪ ವಿಷಯ ತಿಳಿದಾಯಿತು. ಮೇಷ ಆದಿಯಾಗಿ ಮೀನ ಅಂತ್ಯ ಹನ್ನೆರಡು ರಾಶಿಗಳು. ಇವುಗಳಲ್ಲಿ ಚಂದ್ರನು ಸಂಚಾರ ಮಾಡುತ್ತಾನೆ. ಹುಟ್ಟಿದ ಕಾಲದಲ್ಲಿ ಯಾವ ರಾಶಿಯಲ್ಲಿ ಚಂದ್ರನಿರುತ್ತಾನೆಯೋ ಅದೇ 'ಜನ್ಮರಾಶಿ'.

ಮನಸ್ಸು, ಸ್ವಭಾವ, ರೂಪು ಅವರ ಜನ್ಮರಾಶಿಯನ್ನು ಹೊಂದಿಕೊಂಡಿರುತ್ತದೆ. ಇದು ಒಂದು ಮಾರ್ಗ. ಸಾಧಾರಣ ಎಲ್ಲರಿಗೂ ಇದು ಗೊತ್ತಿರುವ ವಿಷಯವೇ ಆಗಿದೆ. ಈ 'ಜನ್ಮರಾಶಿ'ಯಿಂದಲೇ 'ವಾರ ಭವಿಷ್ಯ' 'ದಿನ' 'ಭವಿಷ್ಯ' 'ಗೋಚರ ಫಲ' ಇವುಗಳನ್ನು ನೋಡುವುದು. ಆದ್ದರಿಂದ ಈ ಜನ್ಮರಾಶಿ ಇಷ್ಟು ಹೆಸರುವಾಸಿ.

**ಮೇಷರಾಶಿ :–**

**(ಅಶ್ವಿನೀ ೪ ಪಾದಗಳು, ಭರಣೀ ೪ ಪಾದಗಳು, ಕೃತಿಕಾ ೧ ಪಾದ.)**

'ಮೇಷ' ಅಂದರೆ 'ಆಡು' ಈ ರಾಶಿಯೇ ಜನ್ಮರಾಶಿ. ಅವರಿಗೆ ಆಡಿನಂತೆ ತ್ರಿಕೋಣವಾದ ಮುಖ. ಚಂಚಲ ಮನಸ್ಸು, ಕೋಪ ತಾಪಾದಿಗಳು ಬೇಗನೆ ಬರುತ್ತದೆ. ಅಷ್ಟೇ ಬೇಗ ಮಾಯವಾಗುತ್ತದೆ. ನಿಂತ ಜಾಗದಲ್ಲಿ ನಿಲ್ಲುವ ಸ್ವಭಾವ ಇಲ್ಲ. ಇದನ್ನು 'ಚರರಾಶಿ' ಅಂದರು.

ರಸ ಪ್ರಧಾನವಾದ ಆಹಾರ ಇವರ ಬಯಕೆ. ಮಿಕ್ಕ ವಸ್ತುಗಳನ್ನು ಬಿಸಾಡುತ್ತಾರೆ. ಆಡುಗಳು ಹೇಗೆ ಮೇಯುತ್ತವೆ? ಕಾಡು ಮೇಡುಗಳಲ್ಲಿ ಅಲೆಯುತ್ತ ಚಿಗುರುಗಳನ್ನೇ ತಿನ್ನುತ್ತವೆ. ಇದರಿಂದ 'ಮೇಕೆ ಹಾಲು' ತುಂಬಾ ಆರೋಗ್ಯಕರ. ಗಾಂಧಿ, ವಿನೋಬಾ ಇವರಿಗೆ ಮೇಕೆ ಹಾಲು 'ಅಮೃತ'. ಯಾಕೆ ಹೀಗೆ? ಸಾರವತ್ತಾದ ಮೂಲಿಕೆ ಗಿಡಗಳ ಚಿಗುರುಗಳನ್ನು ತಿನ್ನುತ್ತದೆ. ಆದರಿಂದ ಅದರ ಹಾಲಿನಲ್ಲಿ ಔಷಧ ಮೂಲಿಕೆಗಳ ಗುಣಗಳಿರುತ್ತವೆ. ಅಂತೆಯೇ ಈ ರಾಶಿಯವರೂ ಸಹ ಸ್ವಲ್ಪ ಸ್ವಲ್ಪವಾಗಿ ಊಟಮಾಡುತ್ತಾರೆ. ಅವಸರ ಅಂದರೆ ಅವಸರ. ಅನವಶ್ಯಕವಾದದ್ದು ಬೇಡ ಅವರಿಗೆ.

'ಚರ ರಾಶಿ' ಇದು. ಇವರಿಗೆ ಸಂಚಾರ ಅಂದರೆ ಪ್ರಿಯ. ಹಿಂದು ಮುಂದು ನೋಡದೆ ನುಗ್ಗುತ್ತಾರೆ. 'ಏನು ಕುರಿ ನುಗ್ಗಿದ ಹಾಗೆ' ಅನ್ನುವುದಿಲ್ಲವೇ ಹಾಗೆ. ವಿವೇಕ ಬಹಳ ಮಿತಿ ಇವರಲ್ಲಿ. ಒಂದೇ ಹಠ, ಒಂದೇ ದಾರಿ. ಉಷ್ಣ ಶರೀರಿಗಳು. ಕೆಂಪನೆಯ ಕಣ್ಣುಗಳು ಭಾವೋದ್ರೇಕ ಹೆಚ್ಚು. ಪ್ರೀತಿಯಾಗಲೀ ಕೋಪವಾಗಲೀ ಎರಡೂ ಉದ್ವೇಗಪೂರಿತ ಭಾವಗಳು.

**ವೃಷಭ ರಾಶಿ :–**

**(ಕೃತ್ತಿಕಾ 3 ಪಾದಗಳು, ರೋಹಿಣೀ 4 ಪಾದಗಳು, ಮೃಗಶಿರಾ 2 ಪಾದಗಳು)**

'ವೃಷಭ' ಅಂದರೆ 'ಗೂಳಿ'. ಗೂಳಿಯಂತೆ ವಿಶಾಲವಾದ ಹಣೆ, ಎತ್ತರದ ಹುಬ್ಬು ಉಳ್ಳಕಣ್ಣುಗಳು, ಉಬ್ಬನೆಯ ಆದರೇ ಮೊಂಡಾದ ಮೂಗು.

ತನ್ನ ಹೆಗಲಮೇಲೆ ಎಂತಹ ನೊಗವನ್ನಾಗಲೀ ಗೂಳಿ ಹೊರುತ್ತದೆ. ಅಂತೆಯೇ ಇವರು. ಎಷ್ಟು ಜವಾಬ್ದಾರಿಯನ್ನಾದರೂ ಹೊರುತ್ತಾರೆ. ಕಷ್ಟ ಸಹಿಸುತ್ತಾರೆ. ಬಂಧುಗಳಿಗೆ ಇವರು ಆಶ್ರಯ. ಕೃಷಿಯಲ್ಲಿ ಇವರಿಗೆ ಉತ್ಸಾಹ, ಗೋವುಗಳು ಅಂದರೆ ಪೂಜ್ಯಭಾವ.

ಸ್ತ್ರೀಯರನ್ನು ತೃಪ್ತಿಪಡಿಸುವುದರಲ್ಲಿ ನಿಸ್ಸೀಮರು. ಯಾವಾಲೂ ಸ್ತ್ರೀಯರಿಗೆ ಅನುಕೂಲರು. ಹೆಚ್ಚಿಗೆ ಹಣ ಖರ್ಚುಮಾಡುತ್ತಾರೆ. ಇವರಿಗೆ ಮಕ್ಕಳು ಕಡಿಮೆ.

**ಮಿಥುನರಾಶಿ:–**

**(ಮೃಗಶಿರಾ 2 ಪಾದಗಳು, ಆರುದ್ರಾ 4 ಪಾದಗಳು, ಪುನರ್ವಸು 3ಪಾದಗಳು)**

'ಮಿಥುನ' ಅಂದರೆ ಸ್ತ್ರೀಪುರುಷರ ಪರಸ್ಪರ ಪ್ರೇಮಭಾವ, ಇವರಿಗೆ ಆಕರ್ಷಣೆ ಮಾಡುವ ಕಪ್ಪು ಕಣ್ಣುಗಳು, ಉದ್ದವಾದ ಮೂಗು, ಸ್ತ್ರೀ ಸುಖಕ್ಕೆ ಸಹಕಾರಿಯಾದ ಲಲಿತಕಲೆಗಲ್ಲಿ ನುರಿಶವರು. ನೃತ್ಯ, ಸಂಗೀತ, ಶಿಲ್ಪ, ಚಿತ್ರಕಲೆ ಇವುಗಳಲ್ಲಿ ನುರಿತವರು. ನೃತ್ಯ, ಸಂಗೀತ, ಶಿಲ್ಪ, ಚಿತ್ರಕಲೇ ಇವುಗಳಲ್ಲಿ ವೈಯುಕ್ತಕ ಅಬಿರುಚಿ.

ಶಾಸ್ತ್ರವನ್ನು ತಿಳಿದವರು, ಆದರಂತೆ ನಡೆಯಲು ಸಾಹಸ ಮಾಡುತ್ತಾರೆ. ಅನೇಕ ಭಾಷೆಗಳಲ್ಲಿ ಪಾಂಡಿತ್ಯವಿರುತ್ತೆ. ಬರವಣಿಗೆಯಲ್ಲಿ ನಿಷ್ಣಾತರು. ಇನ್ನೊಬ್ಬರ ಇಂಗಿತವನ್ನು ಅತಿ ಸುಲಭವಾಗಿ ತಿಳಿಯುತ್ತಾರೆ. ಒಟ್ಟನಲ್ಲ ಬುದ್ಧಿಶಾಲಿಗಳು.

**ಕಟಕ ರಾಶಿ:–**

**(ಪುನರ್ವಸು 1 ಪಾದ, ಪುಷ್ಯ 4 ಪಾದಗಳು, ಆಶ್ಲಾಷಾ 4 ಪಾದಗಳು.)**

'ಕಟಕ' ಅಂದರೆ 'ಏಡಿ' ಎಂದರ್ಥ. ಇವರು ಆದರಂತೆಯೇ ಚಪಲ ಚಿತ್ತರು. ಸ್ತ್ರೀಯರಿಗೆ ವಶ್ಯರು, ಬಂಧು, ಮಿತ್ರರು ಬೇಕು. ಇವರಿಗೆ ಆಸ್ತಿ ಮೇಲೆ ಆಸೆ. ಬೇಗ ಬೇಗನೆ ನಡೆಯುವರು. ನೋಡಲು ಅಂದ. ಜೀವನದಲ್ಲಿ ಏರಿಳಿತ

ಉಬ್ಬರಗಳು ಹೆಚ್ಚು. ಸರ್ವದಾ ಏನಾದರೊಂದು ಯೋಚನೆ. ಮನೋ ಹರ್ಷ, ಇಲ್ಲವೇ ಮನೋ ಕ್ಲೇಶ ಇದ್ದೇ ಇರುತ್ತದೆ ಉದ್ವೇಗ ಪೂರಿತ ಮನಸ್ಸು. ಪಂಡಿತ ನೆಹರೂರವರು ಈ ರಾಶಿಯವರು.

ಸಿಂಹರಾಶಿ:–

**(ಮಖಾ 4 ಪಾದಗಳು, ಪುಬ್ಬಾ 4 ಪಾದಗಳು, ಉತ್ತರಾ 1 ಪಾದ)**

ವನಗಳಲ್ಲಿ ಸಿಂಹಗಳು ಸ್ವೇಚ್ಛೆಯಿಂದ ತಿರುಗುತ್ತವೆ. ಅಂತೆಯೇ ಇವರಿಗೂ ಸಹ ವನವಿಹಾರಗಳಲ್ಲಿ ಆಸಕ್ತಿ, ಆನಂದ. ಗುಂಡನೆಯ ಮುಖ ಉಳ್ಳವರಾಗಿ ಮೊಂಡುಮೂಗು. ಸಿಂಹದ ಮುಖದ ಹಾಗೆ, ಸಣ್ಣ ಕಿವಿಗಳು. ಮುಖ ನೋಡಿದರೆ ಸಿಂಹದ ತಲೆ ಜ್ಞಾಪಕಕ್ಕೆ ತರುತ್ತದೆ. ಸಿಂಹದಹಾಗೆ ಅಬ್ಬರ ಹೆಚ್ಚು. ಎಲ್ಲರಿಂದಲೂ ಕೆಲಸ ಮಾಡಿಸಿಕೊಳ್ಳುತ್ತಾರೆ. ಪಿತ್ತಪ್ರಕೃತಿಯಿಂದ ತಲೆನೋವು, ಜ್ವರತಾಪ, ವಾಂತಿಗಳು, ಸಾಮಾನ್ಯ ರೋಗಗಳು. ಸಂಸಾರದಲ್ಲಿ ವಿರಸ ಮನೋಭಾವ. ಉದ್ಯೋಗದಲ್ಲಿ ಅಮಿತಾಸಕ್ತಿ, ಬಾಹ್ಯ ಆಡಂಬರ ಇವರದು.

ಕನ್ಯಾರಾಶಿ:–

**(ಉತ್ತರಾ 3 ಪಾದಗಳು, ಹಸ್ತಾ 4 ಪಾದಗಳು, ಚಿತ್ರಾ 2 ಪಾದಗಳು.)**

'ಕನ್ಯೆ' ಅಂದರೆ ಮದುವೆ ಆಗಲು ಸಿದ್ಧವಿರುವ ಮದುವಣಗಿತ್ತಿ. ಇವಳಿಗೆ ನಾಚಿಕೆ. ಈ ರಾಶಿಯಲ್ಲಿ ಹುಟ್ಟಿದವರಿಗೂ ಅಷ್ಟೆ. ನಾಚಿಕೆ, ಸಂಕೋಚ ಪ್ರಕೃತಿಯವರು. ಮೆಲ್ಲನೆ ಮಾತಾಡುವವರು. ಅಲಂಕಾರ ಬೇಕು. ಒಳ್ಳೆಯ ಪೋಷಾಕುಗಳಿಲ್ಲದೆ ಹೊರಗೆ ಹೊರಡುವುದಿಲ್ಲ. ಎಲ್ಲರೂ ನೋಡಬೇಕು. ಎಲ್ಲರೂ ಹೊಗಳಬೇಕು. ಈ ಆಸೆ. ಹೆಣ್ಣಿನ ಮನೋಭಾವ.

ಇತರರ ಆಶ್ರಯದಲ್ಲಿ ಇವರಿಗೆ ಆನಂದ. ಬಲಿಷ್ಠರಾದ ಗಂಡಸರು ಇವರಿಗೆ ಸ್ನೇಹಿತರು. ಮಧುರ ಮಾತು, ಹಾಸ್ಯಲಲ್ಲೆ, ಆಟ, ಪಾಟ, ಗೀತ ನೃತ್ಯ ಇವುಗಳಲ್ಲಿ ಅಪಾರ ಪ್ರೇಮ. ಶಾಸ್ತ್ರ ಬಲ್ಲವರು. ರತಿ ಪ್ರಿಯರು. ಮಕ್ಕಳು ಕಮ್ಮಿ.

**ತುಲಾ ರಾಶಿ:–**

**(ಚಿತ್ರಾ 2 ಪಾದಗಳು, ಸ್ವಾತಿ 4 ಪಾದಗಲು, ವಿಶಾಖಾ 3 ಪಾದಗಳು)**

'ತುಲಾ ಯಂತ್ರ' ಎಂದರೆ "ತಕ್ಕಡಿ" ಎಂದರ್ಥ. ಈ ರಾಶಿ ವ್ಯಾಪಾರದ ಸ್ಥಳ. ವ್ಯಾಪಾರಕ್ಕೆ ಬೇಕಾದ ಬುದ್ಧಿ ಇವರಿಗೆ ಇರುತ್ತದೆ. ಸುಳ್ಳು ವ್ಯಾಪಾರದಲ್ಲಿ ಇಲ್ಲ. ವ್ಯಾಪಾರಕ್ಕೆ ಸುಳ್ಳೇ ಬುನಾದಿ. ಸುಳ್ಳಿಲ್ಲದೆ ಲಾಭವಿಲ್ಲ. ಮಾತಿಲ್ಲಿಯೂ ಕಾರ್ಯದಲ್ಲಿಯೂ ಇವನು ಬಹು ಚಮತ್ಕಾರಿ.

ತಕ್ಕಡಿಯಲ್ಲಿ ತಾನೇ ತೂಗುವುದು? ಎರಡೂ ಸಮವಿದ್ದರೆ ತೂಕ. ಇವರಲ್ಲಿ ಒಳ್ಳೆಯದು ಕೆಟ್ಟದ್ದು ಸಮವಾಗಿರುತ್ತದೆ. ಒಳ್ಳೆಯದು ಎನ್ನಲೂ ಆಗದು. ಕೆಟ್ಟದ್ದು ಎನ್ನಲೂ ಆಗದು. ಎರಡನ್ನೂ ಸಮ ಮಿಶ್ರ ಮಾಡುತ್ತಾರೆ. ಇವರಿಗೆ ಎರಡು ತರಹೆ ಸ್ವಭಾವ, ಎರಡು ಹೆಸರುಗಳು. ಮನೆಯಲ್ಲಿಯೇ ಬೇರೆ ಹೊರಗಡೆಯೇ ಬೇರೆ. ಹಾಗೆಯೇ ಮುದ್ದು ಹೆಸರೊಂದು, ವ್ಯವಹಾರಕ್ಕಾಗಿ ಒಂದು ಹೆಸರು. ಇದನ್ನೇ ದ್ವಿವ್ಯಕ್ತಿತ್ವ ಎಂದು ಕರೆಯುತ್ತಾರೆ. ಹೃದಯದಲ್ಲಿ ಒಂದು, ಬಾಯಲ್ಲಿ ಒಂದು, ಕೈಯಲ್ಲಿ ಮತ್ತೊಂದು, ಈ ತರಹೆ ನಂಬಲಸಾಧ್ಯ.

ಇವರು ವಿಷ್ಣು ಆರಾಧಕರು. ಶಾಸ್ತ್ರ ಬಲ್ಲವರು ವಾಚಾಳಿಗಳು. ವೇದಾಂತನಿಷ್ಠರು. ಆದರೆ ಇತರ ಕಲ್ಯಾಣಗುಣಗಳು ಸಹ ಬೆರೆತು ಇವರು ಒಂದು ತರಹೆ ವಿಚಿತ್ರ ಜನಗಳು. 'ಮನೆಗೆ ಮಾರಿ, ಪರರಿಗೆ ಉಪಕರಿ' ಸಮಾಚಾರ ಇವರದು.

**ವೃಶ್ಚಿಕ ರಾಶಿ:–**

**(ವಿಶಾಖಾ 1 ಪಾದ, ಅನೂರಾಧಾ 4 ಪಾದಗಳು, ಜ್ಯೇಷ್ಠಾ 4 ಪಾದಗಳು.)**

'ವೃಶ್ಚಿಕ' ಅಂದರೆ 'ಚೇಳು' ಎಲ್ಲಾ ಪ್ರಾಣಿಗಳ ಹಾಗೆ ಮುಂದೆ ಕಡಿಯುವುದಿಲ್ಲ. ಕೊಂಡಿಯಿಂದ ಹಿಂದೆ ಕುಟುಕುತ್ತೆ. ಜನ ವಿಷದಿಂದ ಸಾಯುತ್ತಾರೆ. ಮುಂದೆ ಏನೂ ಭಯವಿಲ್ಲ. ಈ ಜನಗಳು ವಿಷ ಜಂತುವಿನಂತೆ ಕೋಪದ ಪ್ರಕೃತಿ. ಮುಂದೆ ನೋಡುವುದಕ್ಕೆ ಏನೋ ಸಾಧುಗಳು! ಆದರೆ ಹಿಂದಿನಿಂದ ಗೊತ್ತಾಗದ ಹಾಗೆ ಇವರ ಕೋಪ.

ಹಠ ಮಾಡುವ ಸ್ವಭಾವ. ಅಲ್ಪಕ್ಕಾಗಲೀ ದೊಡ್ಡದಕ್ಕಾಗಲೀ ಸಾಧನೆ ಮಾಡುತ್ತಾರೆ. ತಮ್ಮನ್ನು ಕಾಪಾಡಿಕೊಳ್ಳಲು ಬೇಕಾದ ಧೈರ್ಯವಿದೆ. ಸುಂರವಾದ ಅಗಲವಾದ ಮುಖ, ವಿಶಾಲವಾದ ಕಣ್ಣುಗಳು. ಹೆಂಗಸರಿಗೆ ಈ ರಾಶಿ ಬಹಳ ಸಹಾಯಕ. ಕುಳ್ಳಗೆ ಕಟ್ಟುಮಸ್ತಾದ ದೇಹ. ಕಲ್ಲುತಿಂದು ಕರಗಿಸುತ್ತಾರೆ. ಆದರೆ, ಬಾಲ್ಯದಲ್ಲಿ ಇವರಿಗೆ ರೋಗ. ಇವರಿಗೆ ದೊಡ್ಡವರಿಂದ ಸಹಾಯ ಅಪರೂಪ.

**ಧನು ರಾಶಿ:–**

**(ಮೂಲಾ 4 ಪಾದಗಳು, ಪೂ. ಷಾಢಾ 4 ಪಾದಗಳು, ಉತ್ತರಾ 1 ಪಾದ.)**

'ಧನು' ಅಂದರೆ 'ಬಿಲ್ಲು'. ಇದನ್ನು ಕುದುರೆ ರಾಶಿ ಎಂದೂ ಕರೆಯುತ್ತಾರೆ. ಬಿಲ್ಲಿನಂತೆ. ಎತ್ತರವಾಗಿ ಬಗ್ಗಿದ ದೇಹ. ಉದ್ದನೆಯ ಮೂತಿ, ಸಣ್ಣ ಕಣ್ಣುಗಳು. ಬಾಣವಿದ್ದ ಹಾಗೆ, ನೇರ ನಡೆಯುವ, ಮಾತಾಡುವ ಸ್ವಭಾವ. ಬಲವಾದ ಶಕ್ತಿಯುಳ್ಳವರು. ಹಿರಿಯರಿಗೆ ಪ್ರಿಯರು. ಸತ್ಯವನ್ನು ನುಡಿಯುವವರು. ಖಂಡಿತವಾದಿಗಳು. ನ್ಯಾಯ ಮಾರ್ಗದಲ್ಲಿ ಜೀವಿಸಬೇಕು. ಈ ಮನೋಭಾವ.

ಆಸೆ ಇವರಿಗೆ ಬಹಳ. ಜೂಜು ಮುಂತಾದ ಸುಖ ಸಂಪಾದನೆಗೆ ಹೋಗುತ್ತಾರೆ. ಕುದುರೆಯಂತೆ ಶಬ್ದಮಾಡಿಕೊಂಡು ನಡೆಯುತ್ತಾರೆ. ಠೀವಿ. ದರ್ಪ ಇವರ ಕುರುಹುಗಳು.

**ಮಕರ ರಾಶಿ:–**

**(ಉ. ಷಾಢಾ 3 ಪಾದಗಳು, ಶ್ರವಣ 4 ಪಾದಗಳು, ಧನಿಷ್ಠಾ 2 ಪಾದಗಳು.)**

'ಮಕರ' ಎಂದರೆ ಮೊಸಳೆ. ನೀರಿದ್ದರೆ ಸಾಕು ಈ ಪ್ರಾಣಿಗೆ ಬೇರೆಯದೇನೂ ಬೇಡ. ಹತ್ತಿರ ಬಂದ ಪ್ರಾಣಿಗಳನ್ನು ತಿನ್ನುತ್ತೆ. ಮೇಲಿನ ಹೊದಿಕೆ ಎಷ್ಟು ಒರಟೋ ಅದರ ತಳಭಾಗ ಅಷ್ಟೇ ಮೃದು. ಈ ಜನಗಳೂ ಅಷ್ಟೇ. ಅಂತರಾಳದಲ್ಲಿ ಬಹಳ ಮೃದು. ನೋಡಲು ಕಠಿಣ. ಸಂಸಾರದ ಹೊಣೆಯನ್ನು ಆತ್ಮೀಯಭಾವದಿಂದ ಸಾಗಿಸುತ್ತಾರೆ. ಚೌಕನೆಯ ಮುಖ. ಧರ್ಮಕ್ಕೆ ಕಟ್ಟು ಬೀಳುವ ಪ್ರಕೃತಿ. ಸ್ತ್ರೀಯರಲ್ಲಿ ಸರಳ ಮನೋಭಾವ. ಬಹಳ ಮನೋಭಾವ.

## ಕುಂಭರಾಶಿ :–

**(ಧನಿಷ್ಠಾ ೨ ಪಾದಗಳು, ಶತಭಿಷಾ ೪ ಪಾದಗಳು, ಪೂ.ಭಾದ್ರಾ ೩ ಪಾದಗಳು)**

"ಕುಂಭ' ಎಂದರೆ "ಮಡಿಕೆ". ಮಡಿಕೆ ಒಳಗೆ ಒಳಗೆ ಏನಿದೆ? ಯಾರಿಗೆ ತಿಳಿಯುತ್ತೆ? ಇದು ರಹಸ್ಯ ರಾಶಿ. ಇದರಲ್ಲಿ ಮನಸ್ಸು ಯಾವ ರೀತಿ ಕೆಲಸ ಮಾಡುವುದು ಎಂದು ಹೇಳಲಾಗದು. ರಹಸ್ಯ ಪ್ರಕೃತಿ. ಯಾವಾಲೂ ಏನಾದರೂ ಚಿಂತೆ ಇದ್ದೇ ಇರುತ್ತೆ. ಇದರಿಂದ ಹೇಳಿಕೊಳ್ಳಲಾಗದ ಕಷ್ಟ ಅನುಭವಿಸುತ್ತಾರೆ.

ವೇದಾಂತ ರಹಸ್ಯ. ಇತರ ಅಮಾನುಷ ರಹಸ್ಯಗಳ ಅನುಭವ ಇವರಿಗೆ ಪ್ರಿಯ. ಯೋಗಿಗಳು, ತಪಸ್ವಿಗಳು, ವೇದಾಂತ ನಿಷ್ಠರು, ಗುರುಗಳು ಈ ರಾಶಿಯಲ್ಲಿ ಹುಟ್ಟುತ್ತಾರೆ. ಆದ್ದರಿಂದಲೇ ಈ ರಾಶಿಯನ್ನು "ಈಶ್ವರನ ರಾಶಿ" ಎಂದರು. ಈಶ್ವರನಿಗಿಂತ ಯೋಗಿ–ಜ್ಞಾನಿ ಬೇಕೆ?

ಇವರ ಜೀವನದಲ್ಲಿ ಕುಟುಂಬ ಭಾವ ಬಹಳ ತ್ರಾಸದಾಯಕವಿದ್ದು ವೇದಾಂದಲ್ಲಿ ಆಶ್ರಯವನ್ನು ಹೊಂದುತ್ತಾರೆ. ಧಕ್ಷಯಜ್ಞದಲ್ಲಿ ಈಶ್ವರ ಪಾರ್ವತಿಯರ ಗತಿ ಏನಾಯಿತು?

## ಮೀನ ರಾಶಿ:–

**(ಪೂ. ಭಾದ್ರಾ 1 ಪಾದ, ಉ. ಭಾದ್ರಾ 4 ಪಾದಗಳು, ರೇವತೀ 4 ಪಾದಗಳು.)**

"ಮೀನ" ಎಂದರೆ ಮೀನು. ಮೀನು ಯಾವ ರೀತಿ ನೀರು ಕುಡಿಯುತ್ತೆ. ಹಾಗೆಯೇ ಇವರು ಪಾನಾಭಿಲಾಷಿಗಳು. ಸಮುದ್ರ ಮುಖೇನ ಇವರಿಗೆ ಭಾಗ್ಯ ಉದಯ. ಇವರ ಮನಸ್ಸು ನಿರ್ಣಯ ಮಾಡಲಾರದು. ಮೀನಿನಂತೆ ಒದ್ದಲಾಮತ್ತದೆ. ಸಮನಾದ ದೇಹ, ಸುಂದರ ಮುಖ, ದೇವರ ಭಕ್ತಿ, ಸನ್ಮಾರ್ಗ ಪ್ರವರ್ತನೆ, ಕೈವಲ್ಯ ಸಾಧನೆ, ಪ್ರಾಮುಖ್ಯ ಗುಣಗಳು. ಉಪಕಾರ ಹೊಂದಿದರೆ ಅದರ ನೆನಪಿಟ್ಟು ಪ್ರತಿ ಉಪಕಾ ಮಾಡುತ್ತಾರೆ. ದೈವೀಕ ಮನೋಭಾವ, ಶಾಂತಿಮನಸ್ಸು, ಕ್ಷಮಾದಾನ, ದಯೆ ಇವೇ ಇವರ ಆಸ್ತಿ.

ಹೀಗೆ ಸ್ಥೂಲವಾಗಿ ಚಂದ್ರನು ಸಂಚಾರ ಮಾಡುವ ರಾಶಿಯಿಂದ ಮನಸ್ಸಿನ ಗುಣಗಳನ್ನು ತಿಳಿಯಲು ಸಹಾಯವಾಗುವುದು.

# 10

## ಸಂಗದಿಂದ ಗುಣ ನಿರ್ಣಯ

ಯಾವ ವಿಚಾರವೂ ಇಲ್ಲ, ಆಗ ಮನಸ್ಸು ಕೆಲಸ ಮಾಡುವುದಿಲ್ಲ. ಇದೇ ರೀತಿ, ಇದೇ ತರಹೆ ಎಂಧು ಹೇಳುವ ಸ್ವಂತ ಗುಣವೂ ಇಲ್ಲ. ಯಾರ ಜೊತೆಯಲ್ಲಿ ಚಂದ್ರನಿದ್ದರೆ ಆ ಗ್ರಹದ ಗುಣದಂತೆ ಅದರ ಕೆಲಸ.

ನೀರಿಗೆ ಬಣ್ಣವಿಲ್ಲ, ಆಕಾರವಿಲ್ಲ, ರುಚಿಯಿಲ್ಲ. ಸಕ್ಕರೆ ಬೆರೆಸಿದರೆ ಸಿಹಿ, ಉಪ್ಪು ಬೆರೆತರೆ ಉಪ್ಪು. ಕೆಂಪು ಸೀಸೆಯಲ್ಲಿ ಕೆಂಪು, ಬಿಳಿಯದರಲ್ಲಿ ಬಿಳಿ. ಗುಂಡನೇಯ ಪಾತ್ರೆಯಲ್ಲಿ ಗುಂಡಗೆ, ಉದ್ದನೆಯ ಕೊಳವೆಯಲ್ಲಿ ಉದ್ದಕ್ಕೆ. ಹೀಗೆ ತನ್ನ ನೆರೆಯನ್ನು ಆಶ್ರಯಿಸಿ ನೀರಿನ ಗುಣ.

ಸ್ವಂತದ್ದು, ಇತರರಲ್ಲಿ ಇಲ್ಲದ್ದು ಚಂದ್ರನಿಗೆ ಗುಣಗಳಿಲ್ಲ. ಈ ಕಾರಣ ಚಂದ್ರ ನಿರ್ಗುಣನು. ಚಂದ್ರವಂಶದಲ್ಲಿ ಜನಿಸಿದ ಶ್ರೀ ಕೃಷ್ಣ ಪರಮಾತ್ಮನೂ "ನಿರ್ಗುಣ"ನು.

ಚಂದ್ರನಿಗೆ ಯಾವ ಗ್ರಹ ಸಂಬಂಧವೂ ಇಲ್ಲದಿದ್ದಲ್ಲಿ 'ಕೇಮದ್ರುಮ' ಯೋಗ. ತಲೆಯಲ್ಲಿ ಯಾವುದೂ ಇಲ್ಲ ಎಂಧರ್ಥ.

'ನನ್ನ ಮನಸ್ಸಿನಲ್ಲಿ ಏನಿದೆ'? ಎಂದು ಕೇಳಿ. ಆಗ ಚಂದ್ರನೇ ಉತ್ತರ. ಚಂದ್ರ ಯಾವ ಗ್ರಹದ ಸಂಬಂಧದಲ್ಲಿರುತ್ತಾನೆ? ಆ ಗ್ರಹದ ವಿಚಾರವೇ

ಮನಸ್ಸಿನಲ್ಲಿರುತ್ತದೆ. ಸಂಬಂಧ ಯಾವುದೂ ಇಲ್ಲ, ಆಗ ಮನಸ್ಸಿನಲ್ಲಿ ಯಾವ ವಿಚಾರವೂ ಇರದು. ಕುಚೇಷ್ಟೆಗೆ ಕೇಳಿದ್ದು ಎಂದರ್ಥ.

"ಸ್ವಭಾವ" ತನ್ನದೇ ಆಗಿ ಗುರುತಿಸುವ ಒಂದು ಮುಖ್ಯ ಗುಣ. ಅಂಟಿದ ಹಾಗೆ ಇರುತ್ತದೆ. ಚಂದ್ರನ ಸಂಗಡ ಇರುವ ಗ್ರಹದ ಗುಣವೇ ಪ್ರಧಾನ. ಅದೇ ಸ್ವಭಾವ. ಜೀವಿತ ಕಾಲದಲ್ಲಿ ಮಾಡುವ ಎಲ್ಲಾ ಕೆಲಸಗಳಲ್ಲಿ ಅದರ ಪರಿಣಾಮ ಅಚ್ಚಾಗಿ ಕಾಣುತ್ತೆ.

## ನಾಭಸ ಯೋಗ

'ನಭ' ಎಂದರೆ, 'ಆಕಾಶ'. ಯೋಗ ಅಂದರೆ 'ಸೇರುವುದು'. ಗ್ರಹಗಳು ಸೇರಿ ಕೂಡಿದರೆ 'ಗ್ರಹಯೋಗ'. ಆಕಾಶದಲ್ಲಿ ಈ ಯೋಗ. ಈಗ ಅದು 'ನಾಭಸ ಯೋಗ.' ಚಂದ್ರನಿಂದ "ಚಾಂದ್ರಯೋಗ" ಇತ್ಯಾದಿ.

ಚಂದ್ರನ ಜೊತೆಗೆ ಇತರ ಗ್ರಹಗಳು. ಒಂದೊಂದು ಗ್ರಹದ ಪ್ರಭಾವವೂ ಯೋಗ ಆದೀತು. ಆಗ ಆ ಗ್ರಹದ 'ಯೋಗ' ಆಗುತ್ತೆ. ಅದರ ಸ್ವಭಾವ, ಪ್ರಧಾನ ಗುಣ ಆಗುತ್ತೆ. ಚಾಂದ್ರ ಯೋಗಗಳು ಸಾಕಷ್ಟು. 1) ಸುನಫಾ 2) ಅನಫಾ 3) ಧುರಾಧುರ 4) ಕೇಸರಿ 5) ಅಮೃತ 6) ಮಲ 7) ಅಪ್ಸರಾ 8) ಚಂದ್ರಮಂಗಳ. ಇತ್ಯಾದಿ ಯೋಗಗಳು ಪ್ರಸಿದ್ಧ.

## ದೆಶಾಭುಕ್ತಿ

ಚಂದ್ರನ ಮೇಲೆ ಯಾವ ಗ್ರಹದ್ದು ಪ್ರಭಾವ? ಎಷ್ಟು ವರ್ಷ ಅದರ ಪ್ರಭಾವ? ಈ ಕಾಲಕ್ಕೆ ಆ ಗ್ರಹದ ದೆಶೆ ಎಂದರು. 'ಚೆನ್ನಾಗಿ ವ್ಯಾಪಾರ ಆಗುತ್ತೆ. ಕಾರು ಬಂತು. ಮನೆ ಕಟ್ಟಿದ. ಒಳ್ಳೆಯ 'ದೆಶೆ' ಇವನಿಗೆ' ಎನ್ನುತ್ತಾರೆ. ಈ 'ದೆಶೆಗೆ' ರೂಢಿಯ ಅರ್ಥ ಇದು.

ಮೊದಲನೆಯ ದೆಶೆಯ ನಿರ್ಣಯ ಚಂದ್ರನಿಂದ. ಹುಟ್ಟಿದಾಗ ಅವನು ಇರುವ ನಕ್ಷತ್ರ, ಅದರಿಂದ ಈ ದೆಶಾ ನಿರ್ಣಯ. ಅದಕ್ಕೇ ಇದು 'ಉಡುದೆಶಾ' ಆಯಿತು. 'ಉಡು' ಅಂದರೆ ನಕ್ಷತ್ರ. 'ಉಡುಪ' ಎಂದರೆ ಚಂದ್ರ. ಕೃಷ್ಣನಿಗೂ ಇದೇ ಹೆಸರು. ಆದ್ದರಿಂದಲೇ ಕೃಷ್ಣನಿರುವ ಜಾಗ 'ಉಡುಪಿ' ಆಯಿತು.

## ದಶಾಕ್ರಮ

ಮಹರ್ಷಿ 'ಪರಾಶರ' ಇದರ ಗುರು. ಒಂದು ನಕ್ಷತ್ರಕ್ಕೆ ಪ್ರಾರಂಭವಾಗುವ ದೆಶೆ ಯಾವ ಗ್ರಹದ್ದು? ಆನಂತರ ಇತರ ದೆಶೆಗಳು ಯಾವ ಕ್ರಮದಲ್ಲಿ ಬರುತ್ತವೆ ? ಈ ನಿರ್ಣಯ ಈ ಮಹರ್ಷಿಯಿಂದ. ಈ ಕಾರಣ, 'ಪರಾಶರಪ್ರೋಕ್ತ ಉಡದಶಾಕ್ರಮ' ಎಂದರು.

27 ನಕ್ಷತ್ರಗಳು, ಗ್ರಹಗಳು ಒಂಭತ್ತು. ಒಂದೊಂದು ಗ್ರಹಕ್ಕೆ ಮೂರು ನಕ್ಷತ್ರಗಳು. ಕ್ರಮವಾಗಿ ದೆಶೆಗಳು ಮೂರುಸಲ ಬರುತ್ತವೆ. ಕ್ರಮವಾಗಿ 1) ರವಿ, 2) ಚಂದ್ರ, 3) ಕುಜ, 4) ರಾಹು, 5) ಗುರು, 6) ಶನಿ, 7) ಬುಧ 8) ಕೇತು, 9) ಶುಕ್ರ, ಈ ಕ್ರಮದಲ್ಲಿ ದೆಶೆಯಗ್ರಹಗಳು.

'ಕೃತ್ತಿಕಾ' ನಕ್ಷತ್ರದಿಂದ ಈ ದೆಶೆಗಳು. ಮುಂದಿನ ದೆಶೆಗಳು. ಮೇಲಿನ ಕ್ರಮದಲ್ಲಿ ಒಂದರ ಹಿಂದೆ ಒಂದು. ಕೃತಕಾ ನಕ್ಷತ್ರಕ್ಕೆ 'ರವಿ' ರೋಹಿಣೀ ನಕ್ಷತ್ರಕ್ಕೆ 'ಚಂದ್ರ' ಇತ್ಯಾದಿ. ಇದಕ್ಕೆ 'ರವಿದಶಾ ನಕ್ಷತ್ರ' 'ಚಂದ್ರ' ದಶಾ ನಕ್ಷತ್ರ ಎಂದರು. 'ರವಿ ನಕ್ಷತ್ರ' 'ಚಂದ್ರ ನಕ್ಷಕ್ರ'ಎಂದೂ ರೂಢಿಯಲ್ಲಿದೆ.

| | |
|---|---|
| ಕೃತ್ತಿಕಾ – ಉತ್ತರ – ಉತ್ತರಾಷಾಢ | ರವಿ ದೆಶಾ ನಕ್ಷತ್ರಗಳು |
| ರೋಹಿಣೀ – ಹಸ್ತ – ಶ್ರವಣ | ಚಂದ್ರ ದೆಶಾ ನಕ್ಷತ್ರಗಳು |
| ಮೃಗಶಿರಾ – ಚಿತ್ತಾ – ಧನಿಷ್ಠಾ | ಕುಜ ದೆಶಾ ನಕ್ಷತ್ರಗಳು |
| ಆರ್ದ್ರಾ – ಸ್ವಾತೀ – ಶತಭಿಷಾ | ರಾಹು ದೆಶಾ ನಕ್ಷತ್ರಗಳು |
| ಪುನರ್ವಸು – ವಿಶಾಖ – ಪೂರ್ವಾಭಾದ್ರ | ಗುರು ಧೆಶಾ ನಕ್ಷತ್ರಗಳು |
| ಪುಷ್ಯ – ಅನುರಾಧಾ – ಉತ್ತರಾಭಾದ್ರ | ಶನಿ ದೆಶಾ ನಕ್ಷತ್ರಗಳು |
| ಆಶ್ಲೇಷಾ – ಜೇಷ್ಠ – ರೇವತೀ | ಬುಧ ದೆಶಾ ನಕ್ಷತ್ರಗಳು |
| ಮಖ – ಮೂಲಾ – ಅಶ್ವಿನೀ | ಕೇತು ದೆಶಾ ನಕ್ಷತ್ರಗಳು |
| ಪುಬ್ಬಾ – ಪೂರ್ವಾಷಾಢ – ಭರಣೀ | ಶುಕ್ರ ದೆಶಾ ನಕ್ಷತ್ರಗಳು |

ಈ ನಕ್ಷಗಳಿಗೆ ಆಯಾ ಗ್ರಹದ ದೆಶೆಗಳು. ಚಂದ್ರನಿರುವ ನಕ್ಷತ್ರದ ದೆಶೆಯೇ ಮೊದಲು.

## ದೆಶಾ ಕಾಲಗಳು

ರವಿ–ಆರು, ಚಂದ್ರ–ಹತ್ತು, ಕುಜ–ಏಳು, ರಾಹು–ಹದಿನೆಂಟು, ಗುರು–ಹದಿನಾರು, ಶಿನಿ–ಹತೊಂಭತ್ತು, ಬುದ ಹದಿನೇಳು, ಕೇತು–ಏಳು, ಶುಕ್ರ–ಇಪ್ಪತ್ತು ವರುಷಗಳು. ಈರೀತಿ ಪ್ರತಿಗ್ರಹಕ್ಕೆ ದೆಶಾವರ್ಷಗಳು.

ಚಂದ್ರನಿರುವ ನಕ್ಷತ್ರ. ಅದರ ಅವಧಿಯ ಘಳಿಗೆಗಳು. ಅದಕ್ಕೆ ಆಗ್ರಹದ ದೆಶಾ ಕಾಲ ಸಮನ್ವಯ. ಹುಟ್ಟಿದ ಕಾಲಕ್ಕೆ ಎಷ್ಟು ಘಳಿಗೆ ಸಂದಿವೆ? ಅಷ್ಟು ವರ್ಷ ಆ ದೆಶೆಯಲ್ಲಿಯೂ ಗರ್ಭದಲ್ಲಿ ಕಳೆದಿರುತ್ತೆ. ತ್ರೈರಾಶಿಕ ಕ್ರಮದಲ್ಲಿ ಇದರ ನಿರ್ಣಯ.

ಉದಾಹರಣೆಗೆ ಕೃತ್ತಿಕಾ ನಕ್ಷತ್ರ. ಆದಕ್ಕೆ ರವಿ ದೆಶೆ. ಆರು ವರ್ಷಗಳು. ಜನನ ಕಾಲಕ್ಕೆ 30 ಘ. ಕಳೆದಿದೆ. ಪೂರ್ತಿ 60 ಘ. ಆಗ ರವಿ ದೆಶೆ ಮೂರು ವರ್ಷ ಕಳೆದಿದೆ. ಅರ್ಧಭಾಗ ಎಂದರ್ಥ.

## ಏಕದಶಾ ನಕ್ಷತ್ರಗಳು

ಕೃತ್ತಿಕಾ ನಕ್ಷತ್ರದಲ್ಲಿ ಒಂದು ಗ್ರಹ. ಉತ್ತರಾ ನಕ್ಷತ್ರದಲ್ಲಿ ಒಂದು ಗ್ರಹ. ಉತ್ತರಾಷಾಢಾ ನಕ್ಷತ್ರದಲ್ಲಿ ಒಂದು. ಈ ನಕ್ಷತ್ರಗಳಲ್ಲಿ ಒಂದೇ ಗ್ರಹದ ದೆಶೆ. ಈ ಕಾರಣ ' ಏಕ ದಶಾ ನಕ್ಷತ್ರ' ಗಳು ಎಂದರು. ಈ ಮೂರು ಗ್ರಹಗಳಿಗೂ ಅವ್ಯಕ್ತ ಸಂಬಂಧ ಇರುತ್ತೆ.

---

# 11

## ಸವ್ಯ ನಕ್ಷತ್ರ–ಅಪಸವ್ಯ ನಕ್ಷತ್ರ

ವ್ಯವಹಾರದಲ್ಲಿ ಸಾಮಾನ್ಯವಾಗಿ ಎರಡು. ಕತ್ತಲೆ, ಬೆಳಕು ಗಂಡು, ಹೆಣ್ಣು ಇತ್ಯಾದಿ. ಹೀಗೆ ನಕ್ಷತ್ರಗಳಲ್ಲಿಯೂ ಎರಡು ವಿಧಗಳು. ಸವ್ಯ–ಅಪಸವ್ಯ. ಸವ್ಯ ನಕ್ಷತ್ರಗಳು. ಅಪಸವ್ಯ ನಕ್ಷತ್ರಗಳು. ಸವ್ಯ ನಕ್ಷತ್ರಗಳಲ್ಲಿ ಗ್ರಹವಿದ್ದರೆ ಅದು ಗಂಡನ್ನು ತೋರಿಸಿದ್ದರೆ, ಅದೇ ಗ್ರಹವು ಅಪಸವ್ಯ ನಕ್ಷತ್ರದಲ್ಲಿ ಹೆಣ್ಣನ್ನು ತೋರಿಸುವುದು. ಗ್ರಹಗಳು ಸಂಚರಿಸುವಾಗ ವಕ್ರ ಆದರೆ 'ವಕ್ರಗತಿ' ಎಂದರು. ಮುನ್ನಡೆ ನಿಂತು ಹಿನ್ನಡೆಯಲ್ಲಿ ಸಂಚರಿಸುವುದು ಎಂದರ್ಥ. ಈ 'ಗತಿ' ಬದಲಾವಣೆ ಆಗುತ್ತೆ ಆಗ ಒಂದು ಗ್ರಹವು ಸವ್ಯ ನಕ್ಷತ್ರದಲ್ಲಿದರೆ, ಅಪಸವ್ಯ ನಕ್ಷತ್ರದಲ್ಲಿ ಫಲವನ್ನು ಕೊಡುತ್ತದೆ. ಉದಾಹರಣೆಗೆ ಕೃತ್ತಿಕೆಯಲ್ಲಿದ್ದರೆ ಅದರ ಫಲ ಉತ್ತರಾನಕ್ಷತ್ರದಲ್ಲಿ.

ಈ 'ಏಕದಶಾ ನಕ್ಷತ್ರ' ಗಳಲ್ಲಿ ಎರಡೂ ಜಾತಿಯ ನಕ್ಷತ್ರಗಳು ಇರುತ್ತವೆ. ಅಶ್ವಿನೀ ನಕ್ಷತ್ರದಿಂದ ಮೂರು ನಕ್ಷತ್ರ ಸವ್ಯ, ಮೂರು ನಕ್ಷತ್ರ ಅಪಸವ್ಯ . ಈ ರೀತಿ ಈ ನಕ್ಷತ್ರಗಳ ವಿಂಗಡಣೆ.

## ಸವ್ಯ-ಅಪಸವ್ಯ ರಾಶಿಗಳು

ಸವ್ಯ ನಕ್ಷತ್ರಗಳು ಮೂರು. ಅಪಸವ್ಯ ನಕ್ಷತ್ರಗಳು ಮೂರು. ಹೀಗೆ ಅಶ್ವಿನೀ ನಕ್ಷತ್ರದಿಂದ ಎಣಿಸಿ ವಿಂಗಡಿಸಿದರು. ಅಶ್ವಿನೀ-ಭರಣೀ-ಕೃತ್ತಿಕಾ ಈ ಮೂರೂ ಸವ್ಯ. ರೋಹಿಣಿ-ಮೃಗಶಿರಾ-ಆರುದ್ರಾ ಈ ಮೂರು ಅಪಸವ್ಯ. ಪುನರ್ವಸು-ಪುಷ್ಯ-ಆಶ್ಲೇಷಾ ಸವ್ಯ ನಕ್ಷತ್ರಗಳು. ಮಖಾ-ಪೂ. ಫಲ್ಗುನೀ-ಉ. ಫಲ್ಗುನೀ ಇವು ಅಪಸವ್ಯ ನಕ್ಷತ್ರಗಳು. ಹಸ್ತ-ಚಿತ್ತಾ-ಸ್ವಾತೀ ಈ ಮೂರು ಸವ್ಯ ನಕ್ಷತ್ರಗಳು. ವಿಶಾಖ-ಅನೂರಾಧಾ-ಜೇಷ್ಠಾ ಈ ಮೂರು ಅಪಸವ್ಯ. ಮೂಲ-ಪೂ.ಆಷಾಡ-ಉ.ಆಷಾಡ ಈಮೂರುಸವ್ಯ ನಕ್ಷತ್ರಗಳು. ಶ್ರವಣ-ಧನಿಷ್ಠಾ-ಶತಭಿಷಾ ಈ ಮೂರು ಅಪಸವ್ಯ ನಕ್ಷತ್ರಗಳು. ಪೂ.ಭಾದ್ರ- ಉಭಾದ್ರ-ರೇವತೀ ಈ ಮೂರು ಸವ್ಯ ನಕ್ಷತ್ರಗಳು.

ಕೇವಲ ಸವ್ಯ ನಕ್ಷತ್ರಗಳಿಂದ ಕೂಡಿದ ರಾಶಿ ಸವ್ಯರಾಶಿ. ಉದಾಹರಣೆಗೆ ಮೇಷ-ಧನು-ಮೀನ-ಕಟಕ. ಕೇವಲ ಅಪಸವ್ಯ ನಕ್ಷತ್ರಗಳಿಂದ ಕೂಡಿದ ರಾಶಿ ಅಪಸವ್ಯ ರಾಶಿ. ಉದಾಹರಣೆಗೆ ಸಿಂಹ-ವೃಶ್ಚಿಕ ಸವ್ಯ ನಕ್ಷತ್ರದಲ್ಲಿ ಪ್ರಾರಂಭ ಆದರೆ ಅಪಸವ್ಯ ನಕ್ಷತ್ರದಲ್ಲಿ ಕೊನೆ. ಈ ರಾಶಿ ಸವ್ಯಾಪಸವ್ಯ ರಾಶಿ. ಉದಾಹರಣೆಗೆ ವೃಷಭ-ಮಕರ-ತುಲಾ ರಾಶಿಗಳು. ಆದರೆ ಅಪಸವ್ಯ ನಕ್ಷತ್ರದಲ್ಲಿ ಶುರು, ಸವ್ಯ ನಕ್ಷತ್ರದಲ್ಲಿ ಕೊನೆ. ಇದುಅಪಸವ್ಯ ಸವ್ಯ ರಾಶಿಗಳು. ಉದಾಹರಣೆಗೆ ಕುಂಭ-ಮಿಥುನ-ಕನ್ಯ. ಈ ರೀತಿ ನಾಲ್ಕು ಸವ್ಯ ರಾಶಿಗಳು-ಎರಡುಅಪಸವ್ಯರಾಶಿಗಳು-ಮೂರುಸವ್ಯಾಪಸವ್ಯ ರಾಶಿಗಳು-ಮೂರು ಅಪಸವ್ಯ ಸವ್ಯರಾಶಿಗಳು. ಒಟ್ಟು ಕಾಲಚಕ್ರದಲ್ಲಿ ಹನ್ನೆರಡು ರಾಶಿಗಳ ವಿಭಜನೆ.

ಸವ್ಯ ರಾಶಿಗಳಲ್ಲಿ ತ್ರಿಕೋಣ ರಾಶಿಗಳು ಪರಸ್ಪರ ಯೋಗದಲ್ಲಿ ನಡೆಯುತ್ತವೆ. ಉದಾಹರಣೆಗೆ ಮೀನ-ಕಟಕ- ರಾಶಿಗಳು. ಹೀಗೆಯೇ ಮೇಷ-ಧನುರಾಶಿಗಳು. ಅಪಸವ್ಯ ಸವ್ಯ ರಾಶಿಗಳಲ್ಲಿ ಕುಂಭ-ಮಿಥುನ ಈ ತ್ರಿಕೋಣ ರಾಶಿಗಳಲ್ಲಿ ಗ್ರಹಗಳು ಬಂದರೆ ಆ ಗ್ರಹಗಳಿಗೆ ಯೋಗ ಆಗುತ್ತೆ ಸಂಯೋಗ ಅಲ್ಲ.

---

# 12

## ಪರಿವರ್ತನ ಪಾದಗಳು–ನಕ್ಷತ್ರ ನಿಲ್ದಾಣಗಳ ಉತ್ಪತ್ತಿ

ಕಾಲಚಕ್ರದಲ್ಲಿ ನಕ್ಷತ್ರಗಳಿಗೆ ನವಾಂಶಗಳಿಂದ ದೆಶೆಗಳನ್ನು ಎಣಿಸಿದರು. ಸವ್ಯ ನಕ್ಷತ್ರಗಳಿಗೆ ಒಂದು ನಮೂನೆ. ಅಪಸವ್ಯ ನಕ್ಷತ್ರಗಳಿಗೆ ಬೇರೆ ನಮೂನೆ. ಈ ದಶಾಪ್ರಾರಂಭದ ನವಾಂಶಗಳ ವ್ಯತ್ಯಾಸದಿಂದ ಈ ಪರಿವರ್ತನ ಪಾದಗಳು ಉತ್ಪತ್ತಿ ಆಗುತ್ತವೆ.

ಕಾಲಚಕ್ರ

| ನಕ್ಷತ್ರ | ನವಾಂಶ | ದಶಾ ನವಾಂಶ |
|---|---|---|
| ಅಶ್ವಿನಿ | 1) ಮೇಷ | 1) ಮೇಷ |
| | 2) ವೃಷಭ | 2) ಮಕರ |
| | 3) ಮಿಥುನ | 3) ವೃಷಭ |
| | 4) ಕಟಕ | 4) ಕರ್ಕ. |

ಇಲ್ಲಿ ಅಶ್ವಿನಿ ಎರಡನೆಯ ಪಾದಕ್ಕೆ ವೃಷಭ ನವಾಂಶ. ಆದರೆ ದಶಾ ಪ್ರಾರಂಭ ಮಕರದಿಂದ. ಈ ಕಾರಣ ವೃಷಭ ಮತ್ತು ಮಕರ ಪರಿವರ್ತನ ಅಂಶಗಳು. ಈ ಕಾರಣ ವೃಷಭ ಮತ್ತು ಮಕರ ಪರಿವರ್ತನ ಅಂಶಗಳು. ಈ ಮಕರಾಂಶ ಕೃತ್ತಿಕಾ ಎರಡನೆಯ ಪಾದದ ಅಂಶ. ಈ ಕಾರಣ ಅಶ್ವಿನೀ ಎರಡನೆಯ ಪಾದ– ಕೃತ್ತಿಕಾ ಎರಡನೆಯ ಪಾದ ಇವೆರಡೂ ಪರಿವರ್ತನೆ ಪಾದಗಳು ಆದವು. ಹೀಗೆಯೇ ಅಶ್ವಿನೀ ಮೂರನೆಯ ಪಾದ ರೋಹಿಣೀ ಎರಡನೆಯ ಪಾದ ಈ ಎರಡೂ ಪರಿರ್ತನ ಪಾದಗಳು.

ಈಗ ಭರಣೀ ನಕ್ಷತ್ರದಲ್ಲಿ ಒಂದನೆಯ ಪಾದ ಸಿಂಹ ನವಾಂಶ. ಅದರ ಪರಿವರ್ತನದ ಅಂಶ ವೃಶ್ಚಿಕ. ಇಲ್ಲಿ ಭರಣೀ ಒಂದನೆಯ ಪಾದ ಅದೇ ನಕ್ಷತ್ರದ ನಾಲ್ಕನೆಯ ಪಾದ ಪರಿವರ್ತನ ಪಾದಗಳು. ಈಗ ಭರಣೀ ಎರಡನೆಯ ಪಾದ ಕನ್ಯಾಂಶ. ಇದರ ಪರಿವರ್ತನ ನವಾಂಶ ಕುಂಭ ಅಂಶ. ಇಲ್ಲಿ ಈ ಭರಣೀ ಎರಡನೆಯ ಪಾದ ಕೃತ್ತಿಕಾ ಮೂರನೆಯ ಪಾದ ಎರಡೂ ಪರಿರ್ತನ ಪಾದಗಳಾದವು.

ಇಲ್ಲಿ ಭರಣೀ ನಕ್ಷತ್ರ ಎರಡನೆಯ ಪಾದ ಕೃತ್ತಿಕಾ ಮೂರನೆಯ ಪಾದಕ್ಕೆ ಪರಿವರ್ತನೆ ಆಯಿತು. ಆದರೆ ಅಶ್ವಿನೀ ಎರಡನೆಯ ಪಾದ ಇದೇ ಕೃತ್ತಿಕಾ ನಕ್ಷತ್ರದ ಎರಡನೆಯ ಪಾದಕ್ಕೆ ಪರಿವರ್ತನ ಆಗುತ್ತೆ. ಆದರೆ ಈ ಕೃತ್ತಿಕಾ ನಕ್ಷತ್ರದ ಎರಡನೆಯ ಪಾದಕ್ಕೆ ಪರಿವರ್ತನ ಪಾದವಿಲ್ಲ. ತನ್ನ ನವಾಂಶದಲ್ಲಿಯೇ ಅವನಿಗೆ ಅಂಶದೇಶಯೂ ಪ್ರಾರಂಭ. ಇಲ್ಲಿ ಕೃತ್ತಿಕಾ ಎರಡನೆಯ ಪಾದ ಮಕರಾಂಶ, ಮೂರನೆಯ ಪಾದ ಕುಂಭ. ಎರಡಕ್ಕೂ ಒಬ್ಬನೇ ಅಂಶನಾಥ ಶನಿ ಆಗುತ್ತಾನೆ. ಪರಿವರ್ತನ ನಡೆಯಿಲ್ಲದ ಎರಡನೆಯ ಪಾದವನ್ನು ಮೂರನೆಯ ಪಾದಕ್ಕೆ ತಳ್ಳಿದರು. ಈಗ ಭರಣೀ ನಕ್ಷತ್ರದ ಎರಡನೆಯ ಪಾದ–ಅಶ್ವಿನೀ ಎರಡನೆ ಪಾದ ಈ ಎರಡು ಪಾದಗಳಿಗೂ ಪರಿವರ್ತನ ಪಾದ ಕುಂಭ ನವಾಂಶದ ಕೃತ್ತಿಕಾ ಮೂರನೆಯ ಪಾದ ಆಯಿತು. ಈ ಕಾರಣ ಅಶ್ವಿನೀ ನಕ್ಷತ್ರ ಎರಡನೆಯ ಪಾದ–ಭರಣಿಯ ಎರಡನೆಯ ಪಾದ, ಈ ಎರಡೂ ಕೃತ್ತಿಕಾ ಮೂರನೆಯ ಪಾದವನ್ನು ಸೇರುತ್ತೆ. ಈ ಕಾರಣ ಮೇಷ ರಾಶಿಯಲ್ಲಿ ಅಶ್ವಿನೀ (2) ಪಾದ ಬರಣೀ (2) ಪಾದ ಈ ಎರಡು ಪಾದಗಳು ಮುಖ್ಯ ಫಲದಾಯಕ ಪಾದಗಳು.

ವೃಷಭರಾಶಿಯಲ್ಲಿ ಕೃತ್ತಿಕಾ ನಕ್ಷತ್ರ (3) ಪಾದ. ಅದಕ್ಕೆ ಪರಿವರ್ತನೆಯ ಪಾದ ರೋಹಿಣೀ (2) ಪಾದ. ಪರಿವರ್ತನೆ ಇಲ್ಲದ್ದರಿಂದ ಮುಂದಕ್ಕೆ ನೂಕಿದ ರೋಹಿಣೀ (3) ಪಾದ, ಅದಕ್ಕೆ ಪರಿವರ್ತನೆಯ ಪಾದವಾದ ಮೃಗಶಿರಾ (2) ಪಾದ, ಇವು ವೃಷಭ ರಾಶಿಯ ಮುಖ್ಯ ಫಲದಾಯಕ ಪಾದಗಳು.

ಮೃಗಶಿರಾ ನಕ್ಷತ್ರದ (2) ಪಾದ ಮತ್ತು (3) ಪಾದ ಎರಡು ಪಾದಗಳಿಗೂ ಪುನರ್ವಸು (3) ಪಾದ ಪರಿವರ್ತನ ಪಾದ. ಹೀಗೆ ಆರುದ್ರಾ (2) ಪಾದಕ್ಕೂ ಪುನರರ್ವಸು (3) ಪಾದ ಪರಿವರ್ತನ ಪಾದ ಆಗುತ್ತೆ. ಈ ಕಾರಣ ಮಿಥುನ ರಾಶಿಯಲ್ಲಿ ಮೃಗಶಿರಾ (2) ಮೃಗಶಿರಾ (3) ಪಾದಗಳು ಆರುದ್ರಾ (2) ಪಾದ, ಪುನರ್ವಸು (3) ಪಾದ, ಇದರ ಜೊತೆಗೆ ಪುನರ್ವಸು (2) ಪಾದ ಪರಿವರ್ತನೆಯಿಂದ ಆಶ್ಲೇಷಾ (2) ಪಾದಕ್ಕೆ ಹೋಗುತ್ತೆ. ಈ ಕಾರಣ ಮಿಥುನ ರಾಶಿಯಲ್ಲಿ ಮೃಗಶಿರಾ (2) ಮತ್ತು (3) ಪಾದಗಳು, ಆರುದ್ರಾ (2) ಪುನರ್ವಸು (2) ಮತ್ತು (3) ಪಾದಗಳು ಪ್ರಮುಖ ಫಲದಾಯಕ ಪಾದಗಳು.

ಕಟಕ ರಾಶಿಯಲ್ಲಿ ಇದೇ ರೀತಿ ಆಶ್ಲೇಷಾ (2) ಪಾದಕ್ಕೆ ಪುನರ್ವಸು (2) ಪಾದ ಪುಷ್ಯ ನಕ್ಷತ್ರದ (2) ಪಾದ ಆಶ್ಲೇಷಾ (3) ಪಾದಕ್ಕೆ ಹೋಗುತ್ತೆ. ಪರಿವರ್ತನೆ ಇಲ್ಲದ ಆಶ್ಲೇಷಾ (2) ಪಾದ (2) ಪಾದಕ್ಕೆ ಮುನ್ನಡೆ ಹೊಂದುತ್ತೆ. ಈ ರೀತಿ ಕಟಕ ರಾಶಿಯಲ್ಲಿ ಪುಷ್ಯ (2) ಪಾದ ಆಶ್ಲೇಷಾ (3) ಪಾದ ಪ್ರಮುಖ ಫಲದಾಯಕ ಪಾದಗಳಾದವು.

ಅದೇ ರೀತಿ ಸಿಂಹ ರಾಶಿಯಲ್ಲಿ ಆಶ್ಲೇಷಾ ನಕ್ಷತ್ರದ (3) ಪಾದ ಮಖಾ ನಕ್ಷತ್ರದ (2) ಪಾದಕ್ಕೆ ಪರಿವರ್ತನೆ ಆಯಿತು. ಮಖಾ (2) ಪಾದ ಮತ್ತು (3) ಪಾದ ಎರಡೂ ಸೇರಿ ಪೂ. ಫಲ್ಗುನಿ (2) ಪಾದಕ್ಕೆ ಹೋಗುತ್ತೆ. ಈ ಕಾರಣ ಮಖ (2) ಮತ್ತು (3) ಪಾದಗಳು ಪೂ ಫಲ್ಗುನೀ (2) ಪಾದ (3) ಪಾದ ಎರಡೂ ಹಸ್ತ ನಕ್ಷತ್ರದ (3) ಪಾದಕ್ಕೆ ಹೋಗುತ್ತೆ. ಈ ಕಾರಣ ಸಿಂಹರಾಶಿಯಲ್ಲಿ ಮಖಾ (2) ಮತ್ತು (3) ಪಾದ, ಪೂ. ಫಲ್ಗುನೀ (2) ಮತ್ತು (3) ಪಾದ, ಈ ಪಾದಗಳು ಪ್ರಮುಖ ಫಲದಾಯಕ ಪಾದಗಳು.

ಇದೇ ರೀತಿ ಉತ್ತರಾ (2) ಪಾದ ಹಸ್ತ (3) ಪಾದಕ್ಕೆ ಸೇರುತ್ತದೆ. ಈ ಹಸ್ತ (3) ಪಾದ ವಿಶಾಖಾ (2) ಪಾದಕ್ಕೆ ಹೋಗುತ್ತೆ. ಆದರೆ ಹಸ್ತ (2) ಸ್ವಾತೀ ನಕ್ಷತ್ರದ (2) ಮತ್ತು (3) ಪಾದಗಳಿಗೆ ಹೋಗುತ್ತೆ. ಆದೇ ರೀತಿ ಚಿತ್ರಾ ನಕ್ಷತ್ರದ

(2) ಪಾದವೂ ಸ್ವಾತೀ ನಕ್ಷತ್ರದ (3) ಪಾದಕ್ಕೆ ಹೋಗುತ್ತೆ. ಈ ಕಾರಣ ಕನ್ಯಾರಾಶಿಯಲ್ಲಿ ಹಸ್ತಾ ನಕ್ಷತ್ರ (3) ಪಾದಕ್ಕೆ ಹೋಗುವ ಉತ್ತರಾ (2) ಪಾದ, ಹಸ್ತ (2) ಪಾದ (3) ಪಾದ, ಚಿತ್ರಾ ನಕ್ಷತ್ರದ (2) ಪಾದ. ಈ ಪಾದಗಳು ಪ್ರಮುಖ ಫಲದಾಯಕ ಪಾದಗಳು.

ತುಲಾ ರಾಶಿಯಲ್ಲಿ ವಿಶಾಖಾ ನಕ್ಷತ್ರದ (2) ಪಾದಕ್ಕೆ ಹೋಗುವ ಸ್ವಾತೀ ನಕ್ಷತ್ರದ (3) ಪಾದ, ವಿಶಾಖಾ (3) ಪಾದ ಎರಡೂ ಪ್ರಮುಖ ಫಲದಾಯಕ

ವೃಶ್ಚಿಕ ರಾಶಿಯಲ್ಲಿ ವಿಶಾಖಾ (3) ಪಾದ, ಕನ್ಯಾಂಶದ ಅನೂರಾಧಾ (2) ಪಾದಕ್ಕೆ ಹೋಗುತ್ತೆ. ಅನೂರಾಧಾ (2) ಮತ್ತು (3) ಪಾದಗಳು ಜ್ಯೇಷ್ಠಾ ನಕ್ಷತ್ರದ (2) ಪಾದ, ಈ ಮೂರು ಪಾದಗಳು ಮೂಲಾ (3) ಪಾದಕ್ಕೆ ಹೋಗುತ್ತೆ. ಈ ಕಾರಣ ವೃಶ್ಚಿಕ ರಾಶಿಯಲ್ಲಿ ಅನುರಾಧಾ (2) ಮತ್ತು ಪಾದಗಳು ಜ್ಯೇಷ್ಠಾ (2) ಪಾದ ಇವು ಪ್ರಮುಖ ಫಲದಾಯಕ ಪಾದಗಳು.

ಧನುರಾಶಿಯಲ್ಲಿ ಮೂಲಾ (3) ಪಾದ ಶ್ರವಣ (2) ಪಾದಕ್ಕೆ ಪರಿವರ್ತನೆ ಆಗುತ್ತೆ. ಅದೇ ರೀತಿ ಉ. ಷಾಢಾ (3) ಪಾದ ಶ್ರವಣ (2) ಪಾದಕ್ಕೆ ಹೋಗುತ್ತೆ. ಮೂಲಾ (2) ಪಾದ ಉ. ಷಾ. (2) ಪಾದಕ್ಕೆ ಹೋಗುತ್ತೆ. ಈ (2) ಪಾದಕ್ಕೆ ನಡೆಯಿಲ್ಲ. ಉ. ಷಾಢಾ (2) ಪಾದ (3) ಪಾದಕ್ಕೆ ನಡೆ ಹೊಂದಿ ಪೂರ್ವಾಷಾಢಾ (2) ಪಾದದ ನಡೆಯನ್ನು ಹೊಂದುತ್ತೆ. ಈ ಕಾರಣ ಧನುರಾಶಿಯಲ್ಲಿ ಮೂಲಾ (2) ಪಾದ ಪೂರ್ವಾಷಾಢಾ (2) ಪಾದ ಪ್ರಮುಖ ಫಲದಾಯಕ ಪಾದಗಳು.

ಮಕರ ರಾಶಿಯಲ್ಲಿ ಉ. ಆಷಾಢಾ (2) ಪಾದ ಪರಿವರ್ತನೆ ಇಲ್ಲದೆ ಉ. ಆಷಾಢಾ (3) ಪಾದಕ್ಕೆ ನಡೆ ಹೊಂದಿ ಶ್ರವಣ (2) ಪಾದಕ್ಕೆ ಹೋಗುತ್ತೆ. ಈ ಶ್ರವಣ (2) ಮತ್ತು (3) ಪಾದಗಳು ಧನಿಷ್ಠಾ (2) ಪಾದಕ್ಕೆ ಪರಿವರ್ತನೆ ಹೊಂದುತ್ತೆ. ಈಗ ಮಕರ ರಾಶಿಯಲ್ಲಿ ಉ. ಆಷಾಢಾ (3) ಪಾದ ಶ್ರವಣ (2) ಮತ್ತು (3) ಪಾದಗಳು ಧನಿಷ್ಠಾ (2) ಪಾದ ಪ್ರಮುಖ ಫಲದಾಯಕ ಪಾದಗಳಾಗುತ್ತವೆ.

ಕುಂಭರಾಶಿಯಲ್ಲಿ ಧನಿಷ್ಠಾ (2) ಮತ್ತು (3) ಪಾದಗಳಿಗೆ ಪರಿವರ್ತನ ಪಾದ ಪೂರ್ವಭಾದ್ರಾ (3) ಪಾದ ಆಗುತ್ತೆ. ಇದೇ ಪಾದಕ್ಕೆ ಶತಭಿಷಾ (2) ಪಾದವೂ ಹೋಗುತ್ತೆ. ಇದರಿಂದ ಕುಂಭರಾಶಿಯಲ್ಲಿ ಧನಿಷ್ಠಾ (3) ಪಾದ ಶತಭಿಷಾ (2) ಪಾದ, ಪೂರ್ವಾಭಾದ್ರಾ (2) ಪಾದ ಇವು ಪ್ರಮುಖ ಫಲದಾಯಕ ಪಾದಗಳು.

ಮೀನರಾಶಿಯಲ್ಲಿ ಪೂರ್ವಾಭಾದ್ರಾ (2) ಪಾದ ರೇವತೀ (3) ಪಾದ ಎರಡೂ ಅಶ್ವಿನೀ ಎರಡನೆಯ ಪಾದಕ್ಕೆ ಹೋಗುತ್ತೆ. ಪೂರ್ವಾಭಾದ್ರಾ (2) ಪಾದ ರೇವತೀ (2) ಪಾದಕ್ಕೆ ಹೋಗುತ್ತೆ. ಈ ರೇವತೀ (2) ಪಾದಕ್ಕೆ ಪರಿವರ್ತನವಿಲ್ಲ. ಇದರಿಂದ ರೇವತೀ (3) ಪಾದಕ್ಕೆ ಹೋಗುತ್ತೆ. ಈ ರೇವತಿ (3) ಪಾದಕ್ಕೆ ಉ. ಭಾದ್ರಾ (2) ಪಾದವೂ ಸೇರುತ್ತೆ. ಇದರಿಂದ ಮೀನ ರಾಶಿಯಲ್ಲಿ ಉ. ಭಾದ್ರಾ (2) ಪಾದ ರೇವತೀ (2) ಮತ್ತು (3) ಪಾದಗಳು ಪ್ರಮುಖ ಫಲದಾಯಕ ಪಾದಗಳಾದುವು.

ಈ ಪ್ರಮುಖ ಫಲದಾಯಕ ಪಾದಗಳ ಮಾಲೆಗೆ 'ನಾಡಿ ಚಕ್ರ' ಎಂದರು. ಈ ಮಾಲೆಯ ಪಾದಗಳಿಗೆ 'ನಾಡೀ ನಕ್ಷತ್ರ ನಿಲ್ದಾಣಗಳು' ಎಂದರು. ಈಗ ಸಮಗ್ರ ದರ್ಶನದಿಂದ ನಿಲ್ದಾಣಗಳಿಗೆ ಈ ರೀತಿ ಮಾಲಾಕಾರ ರೂಪು ಆಗುತ್ತೆ.

ಅಶ್ವಿನಿ (2) ಭರಣೀ (2) ಕೃತ್ತಿಕಾ (3) ರೋಹಿಣೀ (3) ಮೃಗಶಿರ (2) ಮತ್ತು (3) ಆರುದ್ರಾ (2) ಪುನರ್ವಸು (2) ಪುಷ್ಯ (2) ಆಶ್ಲೇಷಾ (3) ಮಖಾ (3) ಪೂ. ಫಲ್ಗುನೀ (3) ಉ. ಫಲ್ಗುನೀ (2) ಹಸ್ತ (2) ಚಿತ್ರಾ (2) ಸ್ವಾತಿ (3) ವಿಶಾಖ (3) ಅನುರಾಧಾ (3) ಜ್ಯೇಷ್ಠಾ (2) ಮೂಲಾ (2) ಪೂ. ಆಷಾಢಾ (2) ಉ. ಆಷಾಢಾ (3) ಶ್ರವಣ (3) ಧನಿಷ್ಠಾ (3) ಶತಭಿಷಾ (2) ಪೂರ್ವಾಭಾದ್ರಾ (2) ಉ. ಭಾದ್ರಾ (2) ರೇವತೀ (3) ಪಾದ, ಈ ರೀತಿ ನಕ್ಷತ್ರ ನಿಲ್ದಾಣಗಳು.

ಸಮ್ಯ ನಕ್ಷತ್ರದಿಂದ ನಡೆಯುವ ಈ ನಿಲ್ದಾಣಗಳಲ್ಲಿ ವಿಶೇಷ ಅಂಶವಿದೆ.

ಸವ್ಯ ನಕ್ಷತ್ರಯ ಗ್ರಹಕ್ಕೆ ನಿಲ್ದಾಣ ನಡೆಯಲ್ಲಿ ಅಪಸವ್ಯ ನಕ್ಷತ್ರ ಬರುತ್ತೆ. ಆಗ ಅದು ಆ ನಕ್ಷತ್ರವನ್ನು ಬಿಟ್ಟು ಅದರ ತ್ರಿಕೋಣ ಸವ್ಯ ನಕ್ಷತ್ರಕ್ಕೆ ನಡೆಯುತ್ತದೆ. ಹಾಗಿಲ್ಲ ಮುಂದಿನ ಮೊದಲನೆಯ ಸವ್ಯ ನಕ್ಷತ್ರಕ್ಕೆ ನಡೆಯನ್ನು ಹೋಂದುತ್ತವೆ. ಇದನ್ನು "ಸವ್ಯ ಗತಿ" ಎಂದರು.

ಉದಾಹರಣೇಗೆ ಕೃತ್ತಿಕಾ ನಕ್ಷತ್ರ (3) ಪಾದ. ಇದಕ್ಕೆ ಮುಂದಿನ ನಿಲ್ದಾಣ ರೋಹಿಣೀ (2) (3), ಆದರೆ ಇಲ್ಲಿ ಈ ರೊಹಿಣಿ ಅಪಸವ್ಯ ನಕತ್ರ. ಇದರಿಂದ ಈ ರೋಹಿಣೀ ನಕ್ಷತ್ರವನ್ನು ಬಿಟ್ಟು ಅದರ ತ್ರಿಕೋಣದ ಸವ್ಯ ನಕ್ಷತ್ರವಾದ ಹಸ್ತ (2) ಪಾದಕ್ಕೆ ನಡೆಯುತ್ತೆ. ಹಾಗಿಲ್ಲ ಮುಂದೆ ಬರುವ ಸವ್ಯ ನಕ್ಷತ್ರದ ವೃಷಭಾಂಶವಾದ ಪ್ರುನರ್ವಸು (2) ಪಾದಕ್ಕೆ ನಡೆಯುತ್ತದೆ. ಇದು ಈ ಸವ್ಯ ನಡೆಯ ವಿಚಿತ್ರ. ಇದೇ ರೀತಿ ಅಪಸವ್ಯ ನಡೆಯಲ್ಲಿಯೂ ಕ್ರಮದ ಅನುಕರಣೆ ಉಚಿತ ಆದೀತು.

## ಭೂತ–ವರ್ತಮಾನ–ಭವಿಷ್ಯ

ಗ್ರಹ ಯಾವುದಾದರೂ ಸರಿ. ಅದು ಈ ನಕ್ಷತ್ರ ನಿಲ್ದಾಣದ ಪಾದಾಂಶದಲ್ಲಿ ಇದ್ದೀತು. ಹಾಗಿಲ್ಲ, ತಂದುಕೊಳ್ಳಬೇಕು.

ಅದಕ್ಕೆ ಹಿಂದಿನ ನಕ್ಷತ್ರ ನಿಲ್ದಾಣ ಭೂತಕಾಲ. ತಾನಿದ್ದ ನಕ್ಷತ್ರ ನಿಲ್ದಾಣ ಪಾದ ವರ್ತಮಾನ. ಮುಂದೆ ಇರುವ ನಕ್ಷತ್ರ ಪಾದ ಭವಿಷ್ಯ ನಿರ್ಣಯ ಆಗುತ್ತೆ. ಇದರ ಅರ್ಥ ಹೇಗೆ ಬೇಕಾದರೂ ಆದೀತು. ಪೂರ್ವ ಜನ್ಮ, ಈ ಜನ್ಮ, ಮುಂದಿನ ಜನ್ಮ ಆದೀತು. ಕಾರ್ಯಕ್ಕೆ ಆದರೆ ಪ್ರೇರಣೆ, ಕಾರ್ಯಾಚರಣೆ ಕಾರ್ಯದ ಫಲ. ಈ ರೀತಿಯೂ ಆಧೀತು. ಸಮಯ, ನಿಮಿತ್ತ, ಜೋಯಿಸರ ಊಹೆಯಿಂದ ಇದರ ಉಪಯೋಗ ಆಗುತ್ತೆ. ಸವ್ಯ-ತ್ರಿಕೋಣ ಪದ್ಧತಿ ಮಾತ್ರ ಮೇಲೆ ತಿಳಿಸಿದೆ. ಅಪಸವ್ಯ ತ್ರಿಕೋಣ ಮಿಶ್ರ ತ್ರಿಕೋಣಗಳಲ್ಲೇನು ಫಲ? ಗತಿ ಯಾವುದೇ ಆಗಲಿ ನಡೆ ಮಾತ್ರ ಒಂದೇ ನಮೂನೆ.

# 13

## ಗಣಪತಿ ಚಕ್ರ–ಪ್ರಶ್ನಖಾಂಡ

ಪ್ರಚಾರದಲ್ಲಿ ಎಷ್ಟೋ ಪ್ರಶ್ನೆ ಶಾಸ್ತ್ರ ಗ್ರಂಥಗಳಿವೆ. ಕೇರಳೀಯ ಪ್ರಶ್ನೆ, ಅಂಕ ಪ್ರಶ್ನೆ, ಗುರು ಪ್ರಶ್ನೆ. ಇವೆಲ್ಲಕ್ಕಿಂತಲೂ ಮಿಗಿಲಾದುದು, ಸರ್ವತ್ರ ಅನುಕೂಲಕರವಾದುದು 'ಗಣಪತಿ ಪ್ರಶ್ನೆ'.

ಈ ಗಣಪತಿ ಪ್ರಶ್ನ ಗ್ರಂಥದಲ್ಲಿ ಎರಡು ಭಾಗಗಳು. ಪ್ರಶ್ನೆಭಾಗ, ಜಾತಕ ಭಾಗ. ಈ ಗಣಿತವು ಕೇವಲ ಚಂದ್ರನನ್ನೇ ಆಶ್ರಯಿಸಿದೆ. ಇದರ ಅಭ್ಯಾಸಕ್ಕೆ ಶ್ರೀ ಗಣಪತಿ ಉಪಾಸನೆಯು ಅತಿ ಅವಶ್ಯಕ. ನಾಲ್ಕು ಲಕ್ಷ ಗಣಪತಿ ಮೂಲ ಜಪದಿಂದ ಸಿದ್ಧಿ ಆದೀತು. ಹೋಮಾದಿಗಳಿಂದಲೂ ಅನ್ನದಾನಾದಿಗಳಿಂದಲೂ ಗಣಪತಿಯನ್ನು ತೃಪ್ತಿಮಾಡಿದರೆ ಈ ಗಣಿತವು ಸಿದ್ಧಿಯಾಗುವುದು.

ಹಾಗಿಲ್ಲದೆ ಯಾರಾದ್ದೆಯಾದರೂ ಕದ್ದುಪ್ರಯೋಗ ಮಾಡಿದರೆ ಜ್ಯೇಷ್ಠ ಭ್ರಾತೃವಿಗೆ ಅರಿಷ್ಟವು. ದಿವಂಗತ ಶ್ರೀ ಲಕ್ಷ್ಮೀನರಸಿಂಹಯ್ಯ ಎಂಬುವರು ಕರ್ಮಾಂತರದಿಂದ ನಾಪಿತರಾಗಿ ಹುಟ್ಟಿ ಈ ದೇವತಾರ್ಚನೆ ಪ್ರಭಾವದಿಂದ ಈ ಗಣಪತಿ ಪ್ರಶ್ನೆ ಗ್ರಂಥವನ್ನು ಪಡೆದರು. ಇವರ ಹೆಸರು ವಿಶೇಷ. ರಾಜಾಶ್ರಯದಲ್ಲಿ ಖ್ಯಾತ ಜ್ಯೋತಿಷ್ಯರು. ಇವರು ಕಾಲವಾದಾಗ ರಾಜ ಮರ್ಯಾದೆಯಿಂದ ಸಂಸ್ಕಾರ ಮಾಡಿದರಂತೆ!

## ಗಣಪತಿ ಚಕ್ರದ ಮಹಾತ್ಮ್ಯೆ

ಈ ಪ್ರಶ್ನೆ ಗ್ರಂಥವು ಚಕ್ರಾತ್ಮಕವಾದದು. ಅಕ್ಷರ ಸಮೂಹಗಳಿಂದ ಕೂಡಿದ್ದು. ಕೇವಲ ನಕ್ಷತ್ರದಿಂ ಈ ಫಲಗಳನ್ನು ಬರೆದಿರುವರು. ಈಗ ಪ್ರಚಾರದಲ್ಲಿರುವ ಗ್ರಂಥದಲ್ಲಿ 1108 ಅಕ್ಷರ ಚಕ್ರ, 21,000 ಅಕ್ಷರಗಳಿಂದ ಮಾಡಲ್ಪಟ್ಟ ಚಕ್ರ ಮತ್ತು 46000 ಅಕ್ಷರಗಳಿಂದ ಕೂಡಿದ ಚಕ್ರ, ಈ ಮೂರು ಚಕ್ರಗಳೂ ಪ್ರಾಮುಖ್ಯವಾದದ್ದು. ಈ 1108 ಅಕ್ಷರ ಚಕ್ರವು ಉಳಿದೆರಡು ಚಕ್ರಗಳಿಗೆ ಬೀಗದ ಕೈ, ಕೇವಲ ಸೂಚೀ ಚಕ್ರ, ಪ್ರಥಮತಃ ಜಾತಕನ ಜನ್ಮದಿನ. ವಾರ, ನಕ್ಷತ್ರ ವರ್ಷಗಳನ್ನು ತಿಳಿಸುತ್ತೆ. ಪ್ರಶ್ನೆ ಭಾಗದಲ್ಲಿ ಚಿತ್ರ ವಿಚಿತ್ರ ಪ್ರಶ್ನೆಗಳಿಗೆ ಉತ್ರಗಳಿವೆ.

ಪ್ರತಿ ನಾಲ್ಕನೆಯ ಅಕ್ಷರವನ್ನು ಜೋಡಿಸುತ್ತಾ ಹೋದರೆ 21 ಅಕ್ಷರಗಳಲ್ಲಿ ಪ್ರಶ್ನೆಯೂ ಉತ್ತರವೂ ಎರಡೂ ಸಿಗುವುದು.

## ಗಣಪತಿ ಚಕ್ರದ ವೈಶಿಷ್ಟ್ಯ

ವಿಚಿತ್ರವೆಂದರೆ ಯಾವ ಭಾಷೆಯಲ್ಲಿ ಪ್ರಶ್ನೆಯನ್ನು ಕೇಳಿದರೆ ಅದೇ ಭಾಷೆಯಲ್ಲಿ ಉತ್ತರ ಸಿಗುವುದು. ಪದ್ಯರೂಪದಲ್ಲಿ ಉತ್ತರಗಳು ಹೇಳಲ್ಪಟ್ಟವೆ. ಚತುರ್ಥಿ ತಿಥಿ ಬಿಟ್ಟು ಇತರ ದಿವಸಗಳಲ್ಲಿ ಇದನ್ನು ಉಪಯೋಗಿಸುತ್ತಾರೆ. ಆ ದಿನ ಜ್ಯೋತಿಷ್ಯನಿಗೆ ಮಾತ್ರ ಉಪಯೋಗ.

ಈ ಗಣಪತಿ ಚಕ್ರವನ್ನು ಯಾರು ಬರೆದರು? ಹೇಗೆ ಬರೆದರು? ಯಾವ ಕಾಲದವರು? ಇದನ್ನು ಖಚಿತವಾಗಿ ಹೇಳುವುದು ಕಷ್ಟ. ಈ ಗ್ರಂಥವು ಪಾರ್ವತೀ ಗಣಪತಿ ಸಂವಾದದಲ್ಲಿದೆ.

ಸಂಸ್ಕೃತ ಮತ್ತು ತಮಿಳು ಭಾಷೆಗಳಲ್ಲಿ ಇವೆ. ಈ ಗ್ರಂಥವು ಮದರಾಸಿನಲ್ಲಿ ಪುರುಷವಾಕಂ ಹತ್ತಿರ ಒಬ್ಬ ಜೋಯಿಸರಲ್ಲಿದೆ. ಮತ್ತೊಂದು ಕುಪ್ಪಂ– ಬಳಿ ಯಾವುದೋ ಹಳ್ಳಿಯಲ್ಲಿ ಇದೆಯೆಂದು ವರ್ತಮಾನ. ಇವೆರಡೂ ತಮಿಳಿನಲ್ಲಿವೆ. ದಿವಂಗತ ಲಕ್ಷ್ಮೀನರಸಿಂಹಯ್ಯನವರಲ್ಲಿ ಸಂಸ್ಕೃತ ಭಾಷೆಯಲ್ಲಿತ್ತು. ಕೇಂದ್ರ

ಸರಕಾರದಲ್ಲಿ ಇದರ ಫೋಟೋ ಪ್ರತಿ ಇದೆ. ಈಗ ಬೆಂಗಳೂರಿನಲ್ಲಿಯೂ ಒಂದು ಪ್ರತಿ ಇದೆ.

ಈ ಗ್ರಂಥಗಳ ಮೂಲ ಕರ್ತೃತ್ವವು ಗಣಪತಿಗೇ ಸೇರಿದ್ದು. ಮಂತ್ರ ಸಿದ್ಧಿಯನ್ನು ಹೊಂದಿದ ತಕ್ಷಣ ಕನಸಿನಲ್ಲಿಯೇ ಈ ಗಣಿತವನ್ನು ಸಾಕ್ಷಾತ್ ಗಣಪತಿಯೇ ಬೋಧೆ ಮಾಡುತ್ತಾನೆ! ಇದು ಅನೇಕರ ಅನುಭವ. ಆದರೂ ಗ್ರಂಥರೂಪದಲ್ಲಿ ಯಥಾರ್ಥವಾಗಿ ಬರೆದಿರುವ ಕಾರ್ಯಸಾಧನೆಯು ಬಹುಶಃ ಜೈನ ಗಣಿತಜ್ಞರರಿಗೆ ಸಲ್ಲಬಹುದು. ಇದಕ್ಕೆ ಸರಿಯಾದ ಆಧಾರವಿಲ್ಲ. ಆದರೂ ಈ ತೆರನಾದ ಅಕ್ಷರ ವಿದ್ಯೆಯಲ್ಲಿ ಅವರದೇ ಪಳಗಿದ ಕೈ.

## ಗಣಿತ ಕ್ರಮ

ಜಾತಕ ಭಾಗದಲ್ಲಿ ತಾತ್ಕಾಲಿಕ ಚಂದ್ರನನ್ನು ತೆಗೆದುಕೊಳ್ಳಬೇಕು. ಚಂದ್ರನಿರುವ ಜಾಗದಲ್ಲಿ ಗುರುವನ್ನು ಇಟ್ಟುಕೊಳ್ಳಬೇಕು. ಗುರುವಾದ ನಂತರ ಕುಜ, ನಂತರ ಶುಕ್ರ ಅವನಿಗೆ ತ್ರಿಕೋಣದಲ್ಲಿ ಶನಿ, ನಂತರ ರವಿ, ಬುಧ ಈ ಕ್ರಮದಲ್ಲಿ ಗ್ರಹಗಳನ್ನು ಬರೆಯಬೇಕು. ನಕ್ಷತ್ರ ನಿಲ್ದಾಣಗಳೇ ಈ ಸ್ಥಾನಗಳು.

ಉದಾಹರಣೆಗೆ ಚಿತ್ತಾ ನಕ್ಷತ್ರದಲ್ಲಿ ಗಣಪತಿಯ ಜನನ. ಅವನಿಗೆ ಪ್ರಿಯವಾದ ನಕ್ಷತ್ರ ಚಿತ್ರಾ. ಆ ಚಿತ್ರಾ ನಕ್ಷತ್ರದಲ್ಲಿ ಗುರುವನ್ನು ಬರೆಯಬೇಕು. ಮುಂದೆ. ಸ್ವಾತೀ ನಕ್ಷತ್ರ ಸವ್ಯ ಇದು ಮೃತ್ಯು ತಾರೆ, ಅರಿಷ್ಟ. ಈ ಕಾರಣ. ಅದರ ತ್ರಿಕೋಣದ ಅಪವಸ್ಯ ಆರುದ್ರಾ ತೆಗೆದುಕೊಳ್ಳಬೇಕು. ಈ ಆರುದ್ರಾ ನಕ್ಷತ್ರದಲ್ಲಿ ಕುಜ. ಮುಂದಿನದು ಸವ್ಯ ನಕ್ಷತ್ರ ಪುನರ್ವಸು ಶುಕ್ರ. ಪುನರ್ವಸು ೨ ಪಾದದಿಂದ ಆಶ್ಲೇಷಾ ನಕ್ಷತ್ರದಲ್ಲಿ ರವಿ, ಪುಷ್ಯ ನಕ್ಷತ್ರದಲ್ಲಿ ಬುಧ, ಹೀಗಾಗಿ ಜಾತಕದಲ್ಲಿ ಶುಕ್ರ ನಕ್ಷತ್ರಕ್ಕೆ ತ್ರಿಕೋಣದಲ್ಲಿ ಶನಿ. ಈಗ ಜಾತಕ ಸ್ಥೂಲವಾಗಿ ಬರೆದಾಯಿತು.

ಈ ಗಣಪತಿ ಚಕ್ರದ ಮೊದಲನೆಯ ಜಾತಕ ಈ ರೀತಿ. ಆದರಿಂದ ಮುಂದಿನ ಜಾತಕ ಸ್ವಾತಿನಕ್ಷತ್ರದಿಂದ ಗಣಿತ ಪ್ರಾರಂಭ ಮಾಡಬೇಕು. ಇದು ಜಾತಕದ ಭಾಗ.

ಕೇಳುವ ಕಾಲದಲ್ಲಿ ಚಂದ್ರನು ಯಾವ ನಕ್ಷತ್ರದಲ್ಲಿರುವನೋ ಆ

ನಕ್ಷತ್ರದಲ್ಲಿ ಜನ್ಮ ಜಾತಕದಲ್ಲಿ ಗ್ರಹ ಯಾವುದಿವೆ? ಆ ಗ್ರಹದ ನವಾಂಶವೇ ಪ್ರಶ್ನೆಲಗ್ನ. ಆ ಲಗ್ನಕ್ಕೆ ಈ ಗ್ರಹದ ಫಲವೇ ಉತ್ತರ. ಜೋಯಿಸರ ಜಾತಕದಲ್ಲಿ ಪ್ರಶ್ನಕಾಲದ ಚಂದ್ರನು ಸಂಚಾರಮಾಡುವ ನಕ್ಷತ್ರದಲ್ಲಿ ಇರುವ ಗ್ರಹದ ಫಲವನ್ನು ಕೇಳುತ್ತಾರೆ. ಉದಾಹರಣೆಗೇ ಕೃತ್ತಿಕಾ ನಕ್ಷತ್ರ ವೃಷಭಾ ರಾಶಿಯಲ್ಲಿ ಕುಜನಿದ್ದಾನೆ. ಕೃತ್ತಿಕಾ ನಕ್ಷತ್ರ ಉತ್ತರಾ ನಕ್ಷತ್ರ, ಉತ್ತರಾಷಾಢಾ ನಕ್ಷತ್ರ ಬಂದಾಗ ಪ್ರತಿ ತಿಂಗಳಿನಲ್ಲಿ ಈ ಕುಜಗ್ರಹದ ಮೇಲೆ ಪ್ರಶ್ನೆಗಳನ್ನು ಕೇಳುತ್ತಾರೆ ಎಂದು ತಿಳಿಯಬೇಕು.

27 ನಕ್ಷತ್ರಗಳಲ್ಲಿ 108 ಪಾದಗಳಲ್ಲಿ ಈ ಕುಜನನ್ನು ಇಟ್ಟು ಫಲಗಳನ್ನು ಬರೆದರು. ಫಲಕಾಲ ವರುಷವನ್ನು ಪ್ರಶ್ನೆ ಕಾಲದಲ್ಲಿ ಜಾತಕನ ವಯಸ್ಸೆಂದು ನಿಗದಿ ಮಾಡಿದರು. ಈ 108 ಭಾಗ ಅಥವಾ ಪಾದಗಳಲ್ಲಿ ಈ ಗ್ರಹದ ಫಲವನ್ನು ಜ್ಯೋತಿಷ್ಯ ಶಾಸ್ತ್ರ ಸಮ್ಮತವಾಗಿ ಪ್ರಶ್ನೆ ಮತ್ತು ಉತ್ತರ ರೂಪದಲ್ಲಿ ಬರೆದರು. ಇದನ್ನು 'ಕುಜನಾಡಿ' ಅಂದರು.

ನಕ್ಷತ್ರ ಪಥದ ಮಾರ್ಗದಂತೆ ಒಂದು ಪಾದವನ್ನು 12 ಭಾಗ ಮಾಡಿ 1296 ಭಾಗಗಳಲ್ಲಿ ಈ ಗ್ರಹದ ಫಲಗಳನ್ನು ಬರೆದರು. ಹೀಗೆ ಪ್ರತಿಯೊಂದು ಗ್ರಹಕ್ಕೆ ಪ್ರಶ್ನೋತ್ತರ ರೂಪದಲ್ಲಿ ಗ್ರಂಥ ನಿರ್ಮಾಣ ಮಾಡಿದರು. ಒಟ್ಟು 1293 x 9=116644 ಪುಟಗಳು ಈ ಗ್ರಂಥದಲ್ಲಿವೆ.

ಪ್ರಶ್ನಕಾಲದ ಚಂದ್ರನಿಂದ ಯಾವ ಪುಟದ ಫಲ ಅವನಿಗೆ ಸಲ್ಲುತ್ತೆ ಎಂದು ನಿಗದಿ ಮಾಡಿದರು. ಮೇಷಾದಿ ಎಷ್ಟನೆಯ ಪಾದ, ಅದೇ ಪುಟ ಸಂಖ್ಯೆ ಆಗುತ್ತೆ.

ಆದುದರಿಂದ ಚಂದ್ರನಿಲ್ಲದೆ ಈ ಶಾಸ್ತ್ರವಿಲ್ಲ. ಸೂರ್ಯನೇ ಶಾಸ್ತ್ರ. ಚಂದ್ರನೇ ಅದರ ಸೂಜೀ ಗ್ರಹ, ಅದರ ಜೀವಾಳ. ಈ ಸೂರ್ಯ ಚಂದ್ರರ ಮಧ್ಯೆ ಈ ಶಾಸ್ತ್ರದ ಪ್ರಕಾಶ.

---

# 14

## ಮಂಗಳನ ಮಹತ್ವ

ಚಂದ್ರನಿಗೆ ಸೂರ್ಯನದೇ ಬೆಳಕು. ಚಂದ್ರನು ಕನ್ನಡಿಯಂತೆ ಸೂರ್ಯನ ಬೆಳಕನ್ನು ಭೂಮಿಯ ಮೇಲೆ ಪ್ರತಿಬಿಂಬಿಸುತ್ತಾನೆ. ಆದರೆ ಸೂರ್ಯನಂತೆ ಉಷ್ಣವು ಇರದು. ಅವನದು ಶೀತ ಕಿರಣಗಳು. ಇವೆರಡೂ ಪ್ರಕಾಶವನ್ನು ಕೊಡುತ್ತವೆ. ಇವುಗಳಿಗೆ 'ಪ್ರಕಾಶಕ ಗ್ರಹಗಳು' ಅಂದರು.

ಚಂದ್ರನು ಭೂಮಿಗೆ ಅತಿ ಹತ್ತಿರ ಗ್ರಹ. ಆದರೆ ಇತರ ಗ್ರಹಗಳು ಬಹಳ ದೂರದಲ್ಲಿವೆ. ಅಷ್ಟು ದೂರ ಪ್ರಕಾಶ ಬರಲಾರದು. ಬಂದರೂ ಸಹ ಅಲ್ಪ. ಕತ್ತಲಿನಲ್ಲಿ ಅವು ಕಾಣುವಷ್ಟು ಮಾತ್ರ ಪ್ರಕಾಶ. ಆದರೆ ಇವು ಚಂದ್ರನಂತೆ ಕತ್ತಲನ್ನು ಬೆಳಕು ಮಾಡಲಾರವು. ಆದ್ದರಿಂದ ಅವುಗಳು 'ಅಪ್ರಕಾಶಕ ಗ್ರಹಗಳು'. ಹಾಗೆ ಮಂಗಳನೂ ಒಂದು ಅಪ್ರಕಾಶಕ ಗ್ರಹ. ಇವನ ಗುಣವು ಬೆಂಕಿಗೆ ಸಮಾನವಾದುದು. ಆದುದರಿಂದ 'ಅಂಗಾರಕ' ಎಂದು ಹೆಸರಾಯಿತು. ಮೂಲತತ್ವದಿಂದ ಈ ಗ್ರಹವು ಬೆಂಕಿ. ಇವನೇ ಉಷ್ಣಕ್ಕೆ ಕಾರಕ. ಉಷ್ಣಜನಕ ಅಂಗಗಳಿಗೂ ಕಾರಕ. ಉಷ್ಣದಿಂದ ಉಂಟಾಗುವ ಫಲಗಳು ಮತ್ತು ಮನೋಭಾವಗಳಿಗೆ ಕಾರಕ.

ದೇಹದಲ್ಲಿಯೂ ಉಷ್ಣವು ಉತ್ಪತ್ತಿ ಆಗುತ್ತೆ. ಅಂಗಾಂಗಗಳ ಚಟುವಟಿಕೆಯಿಂದ, ಹಸಿವಿನಿಂದ ಈ ಉಷ್ಣ. ಇದನ್ನು ಜಠರಾಗ್ನಿ ಎಂದರು. ಇದರಿಂದ ಆಹಾರ ಅರಗುವುದು. ಅಂಗಾಂಗಗಳಿಗೆ ಬೇಕಾದ ಶಕ್ತಿಯನ್ನು ಆಹಾರ ಕೊಡುತ್ತೆ. ಆದರೆ ಸಾಕಷ್ಟು ಆಹಾರವಿಲ್ಲ. ಆಗ ಉಷ್ಣವು ಅತಿ ಆಗುವುದು. ಜಠರದಲ್ಲಿ ಹುಟ್ಟುವುದರಿಂದ ಇದೇ ಜಠರಾಗ್ನಿ. ಜಠರಕಾರಕ, ಕ್ಷುತ್‌ಕಾರಕ ಕುಜನಿಗೆ ಬಿರುದೂ ಬಂದಿತು. ಹೊಟ್ಟೆ ಹಸಿಯುತ್ತೆ. ಬಾಯಾರಿ ಧಮಿವಾಗುತ್ತದೆ. ನೀರಾದರೂ ಬೇಕು ಎನ್ನಿಸುತ್ತೆ. ಈ ತೃಷ್ಣೆ ಅಗ್ನಿಯಿಂದ, ಕುಜನಿಂದ.

ವಸ್ತುಗಳು ಪರಸ್ಪರ ಉಜ್ಜುವುದರಿಂದ ಶಾಖ ಉತ್ಪತ್ತಿಯಾಗುತ್ತದೆ. ಇದೇ ಬೆಂಕಿ. ಒಂದು ಮರದ ತುಂಡಿನಲ್ಲಿ ಗುಣಿ ತೋಡುವುದು. ಮತ್ತೊಂದು ತುಂಡನ್ನು ಅದರಲ್ಲಿಡುವುದು. ಮಜ್ಜಿಗೆ ಕಡೆದಂತೆ ಕಡೆಯುತ್ತಿದ್ದರೆ, ಬೆಂಕಿ ಉತ್ಪತ್ತಿಯಾಗುವುದು. ಇದಕ್ಕೆ 'ಅರಣಿ' ಎಂದರು. ಇದೂ ಕುಜನೇ!

ಶಾಖ ಉತ್ಪತ್ತಿಯಾಗುತ್ತೆ. ಉಜ್ಜಿದರೆ ಕೈಯೂ ಬಿಸಿ ಆಗುತ್ತೆ. ಈ ಬೆಂಕಿಗೆ ತಿಕ್ಕುವುದು ಆವಶ್ಯಕ. ಹಾಗೆಯೇ ಎಲ್ಲೆಲ್ಲಿಯೂ ತಿಕ್ಕಾಟ. ಅಧಿಕಾರಕ್ಕೆ ತಿಕ್ಕಾಟ, ರಾಜ್ಯಕ್ಕಾಗಿ ತಿಕ್ಕಾಟ, ಮಾತಿನಲ್ಲಿ ತಿಕ್ಕಾಟ ಇತ್ಯಾದಿ. ರಾಜ್ಯಕ್ಕಾಗಿ ತಿಕ್ಕಾಟವೆಂದರು. ಒಬ್ಬನ ರಾಜ್ಯವನ್ನು ಬಲವಂತವಾಗಿ ಕಸಿಯಲು ಮಾಡುವ ಸಾಹಸ. ಇದಕ್ಕೆ ಯುದ್ಧವೆಂದರು. ಈ ಯುದ್ಧಕ್ಕೆ ಬೇಕಾದ ಸಕಲ ಸಾಮಗ್ರಿಗಳಿಗೂ ಇವನೇ ಕಾರಕ ಗ್ರಹವು. ಶಸ್ತ್ರಗಳು, ಅಸ್ತ್ರಗಳು, ಕುದುರೆ, ಕಾಲಾಳು ಇತ್ಯಾದಿ.

ಮಾತಿನ ತಿಕ್ಕಾಟವೇ 'ವಾದ ವಿವಾದ'. ಅದಕ್ಕೆ ಸಂಬಂಧಪಟ್ಟ ವಿಶಿಷ್ಟ ಸಾಮಗ್ರಿಗಳಿಗೂ ಮಂಗಳನೇ ಕಾರಕ. ಮಾತುಗಳಲ್ಲಿ ಯುದ್ಧ ಮಾಡುವ 'ರಣರಂಗ'ಕ್ಕೂ 'ನ್ಯಾಯಾಲಯ'ಕ್ಕೂ ಇವನೇ ಕಾರಕ.

### ದ್ವೇಷಕಾರಕ–ವೀರ್ಯಕಾರಕ

ಯಾವುದೇ ರೀತಿಯಾದ ಯುದ್ಧವಾಗಲೀ ವಾದ–ವಿವಾದವಾಗಲೀ

ದ್ವೇಷವು ಪ್ರಾಮುಖ್ಯ. ಈ ದ್ವೇಷವು ಉತ್ಪತ್ತಿಯಾಗುವ ಕ್ರಮವು ವಿಚಿತ್ರ. ಈ ದ್ವೇಷಕ್ಕೆ ಮುಖ್ಯ ಕಾರಣ 'ನೊಂದು ಪರಾಭವ'. ಆಸೆಗಾಗಿ ಹೊಡೆದಾಡುವುದು. ಬಲಿಷ್ಠನಾದವನ ಪೀಡೆಯಿಂದ ಅಪಜಯವಾಗುವುದು. ಇದು ಅವಮಾನ. ಇದರ ಪ್ರತೀಕಾರ ' ದ್ವೇಷ–ಸೇಡು '

ಪೀಡೆ, ದ್ವೇಷ, ಜಯ, ಅಪಜಯ ಇವೆಲ್ಲಕ್ಕೂ ಕಾರಣವೇ ಈ ಗ್ರಹ. ಬಲ, ವೀರ್ಯ, ಎಲವೂ ಇವನೇ. ' ವೀರ್ಯ ಕಾರಕ ' ಕುಜ ಎಂದರು.

## ಮಾಂಸ, ರಕ್ತ ಕಾರಕ

ಹುಟ್ಟುವಾಗ ಎಲ್ಲರೂ ಮಕ್ಕಳು. ಎಲ್ಲರೂ ಆಹಾರ ನಿದ್ರೆಗಳಿಂದ ಬೆಳೆಯುತ್ತಾರೆ. ಅವರು ತಿಂದ ಆಹಾರ ಒಂದೊಂದೂ ದೇಹದ ಮೇಲೆ ಒಂದೊಂದೂ ಪರಿಣಾಮ.

ಜಠರಾಗ್ನಿ ಜಾಸ್ತಿ, ಆಗ ತಿಂದದ್ದೆಲ್ಲಾ ಭಸ್ಮ! ಆಳು ಮಾತ್ರ ಕಡ್ಡಿಯಂತೆ! ಕೆಲವರಿಗೆ ರಾಕ್ಷಸರ ತರಹ ಬೆಳವಣಿಗೆ. ಕೆಲವರು ಮಾಂಸ ಖಂಡಗಳನ್ನು ಬೆಳೆಸುತ್ತಾರೆ. ಇದಕ್ಕೆ ' ಸಾಧನೆ ' ಮಾಡುತ್ತಾರೆ. ರಕ್ತ ಮಾಂಸಗಳನ್ನು ಅಭಿವೃದ್ಧಿ ಮಾಡುತ್ತಾರೆ. ಗರಡಿ ಸಾಧನೆ ಮಾಡುತ್ತಾರೆ. ಇದರ ಪರಿಣಾಮ ಅಸಾಧಾರಣ ವೀರ್ಯ ಬಲ. ಇದರಿಂದ 'ಸಾಧನಾ' ಗ್ರಹವು ಈ ಕುಜನೇ, ರಕ್ತ ಮಾಂಸಗಳಿಗೂ ಕಾರಕನೂ, ಇವನೇ!

ಚೆನ್ನಾಗಿ ಬೆಳೆಸಿಕೊಂಡ ದೇಹವನ್ನು ಪಡೆದವನೇ ಜಟ್ಟಿ. ಇವನಿಗೆ ಬಲ ಹೆಚ್ಚು. ತನಗೆ ಬಲ ಇದೆ ಎಂಬ ಅಹಂಕಾರ ಬೇರೆ. ಈ ಅಹಂಕಾರದಿಂದ ಇವನು ಚೇಷ್ಟೆ ಮಾಡುತ್ತಾನೆ. ತನಗಿಂತ ಕಮ್ಮಿ ಬಲ ಉಳ್ಳವರನ್ನು ಕೆಣಕಿ ಸಂತೋಷ ಪಡುತ್ತಾನೆ. ಇತರರನ್ನು ಪೀಡಿಸುತ್ತಾನೆ. ಆದುದರಿಂದಲೇ ಇದು ಪಾಪ ಅಂದರು. ಪಾಪ ಅಂದರೇನು? 'ಪಾಪಾಯ ಪರ ಪೀಡನಮ್' ಅಂದರು ವೇದವ್ಯಾಸ ಮಹರ್ಷಿಗಳು.

ದುಷ್ಟರು ಸಜ್ಜನರನ್ನು ಪೀಡಿಸುತ್ತಾರೆ. ಈ ಬಲಿಷ್ಠರಾದ ದುಷ್ಟರನ್ನು

ಶಿಕ್ಷಿಸುವವರು ಯಾರು? ಎಲ್ಲರಿಗಿಂತ ಬಲಿಷ್ಠನಾದವನು ರಾಜ. ಈ ರಾಜನಿಗೆ ಸೈನ್ಯ ಬಲವಿದೆ. ಇದರಿಂದ ಅವನು ಎಲ್ಲರಿಗಿಂತ ಬಲಿಷ್ಠ. ಅವನು ದುಷ್ಟರನ್ನುಶಿಕ್ಷೆ ಮಾಡುತ್ತಾನೆ. ದಂಡವನ್ನು ಕೊಡುತ್ತಾನೆ. ಇದಕ್ಕೆ ಒಬ್ಬ ಅಧಿಕಾರಿಯನ್ನು ನೇಮಿಸುತ್ತಾನೆ. ಈ ಅಧಿಕಾರಿಯೂ ದುಷ್ಟರಿಗೆ ನ್ಯಾಯವಾಗಿ ಶಿಕ್ಷೆ ಕೊಡುತ್ತಾನೆ.

ಈ ಅಧಿಕಾರಿಯೇ ದಂಡಾಧಿಕಾರಿ, ನ್ಯಾಯಮೂರ್ತಿ ಅಂದರು. ಈ ಶಿಕ್ಷೆಯನ್ನು ಆಜ್ಞೆ ಮಾಡುವವರು ನ್ಯಾಯ ಮೂರ್ತಿ. ಆದರೆ ಅದನ್ನು ಕೊಡುವವನು ಪೋಲೀಸು ಅಧಿಕಾರಿ. ಕಳ್ಳರನ್ನು ಹಿಡಿಯುವವನೂ ಪೋಲೀಸು ಅಧಿಕಾರಿಯೇ. ಈ ಕಾರಣ 'ದುಷ್ಟ ಶಿಕ್ಷಣ, ಶಿಷ್ಟ ಪರಿಪಾಲನೆ ' ಕಾರಕ ಈ ಮಂಗಳ ಗ್ರಹ.

## ಸಾಮುದ್ರಿಕ ಶಾಸ್ತ್ರ

ಯಾವುದೇ ಕೆಲಸ ಮಾಡಬೇಕು ಕೆಲಸ ಮಾಡಲು ಕೈ ಇರಬೇಕು. ಅಂಗಾಂಗಗಳಿಗೆ ಕುಜನು ಕಾರಕನು. ಕೈಗೆ, ಭುಜಗಳಿಗೆ ಅದರಲ್ಲಿಯೂ ಕೈಗಳಿಗೆ,ಕರಸೂಚಕ ಗ್ರಹ. ಕರ ಎಂದರೆ 'ದಂಡ'ವೆಂದೂ ಅರ್ಥ.

ಕರ ಅಂದರೆ ಕೈ. ಕೈ ಕೆಲಸಗಳು, ಕೈಗಾರಿಕೆಗೆ ಕಾರಕನು ಮಂಗಳನು. ಕೈಯಿಂದ ಎಲ್ಲಾ ಕೆಲಸಗಳು. ಅಂಗೈ, ಮುಂಗೈ ಎರಡು ವಿಧಗಳು. ಅಂಗೈಯಲ್ಲಿ ಗೆರೆಗಳು ಇವೆ. !

ಪಾರ್ವತೀ ಸಮೇತ ಈಶ್ವರನು. ಮಕ್ಕಳು ಗಣೇಷ ಮತ್ತು ಸುಬ್ರಹ್ಮಣ್ಯ. ಇವರಿಬ್ಬರಿಗೂ ಕರ್ಮಾ ಕರ್ಮ ಫಲ ಸೂಚಕ ಈ ಶಾಸ್ತ್ರವನ್ನು ಹೇಳಿದರು. ಆಗ ಆಯಸ್ಸು ಮತ್ತು ಘಟನೆಗಳು ನಡೆಯುವ ವಯಸ್ಸನ್ನು ಗಣಪತಿ ನಭೋಚಕ್ರದಲ್ಲಿ ಅಳಿದನಂತೆ. ನಕ್ಷತ್ರಗಳಿಂದ ಕೂಡಿದ್ದು ನಭೋ ಚಕ್ರ. ಇದಕ್ಕೆ ಕಾಲ ಚಕ್ರ ಎಂದಾಯಿತು.

ಆದರೆ ಸುಬ್ರಹ್ಮಣ್ಯನು ಕೈಯಲ್ಲಿ ಕಾಣುವ ರೇಖೆಗಳಲ್ಲಿ ಅಳಿದನಂತೆ! ಈಶ್ವರನು ಹೇಳಿದ ಶಾಸ್ತ್ರವನ್ನು ಇವನು ಅಂಗೈಯಲ್ಲಿ ಗುರುತಿಸಿದನಂತೆ!

ವಯಸ್ಸನ್ನು ಗೆರೆಗಳಲ್ಲಿ ಅಳೆದನಂತೆ ! ಆದುದರಿಂದ ಶಾಸ್ತ್ರಗಳು ಎರಡು. ಕರಶಾಸ್ತ್ರ-ಜ್ಯೋತಿಷ್ಯ ಇದರಿಂದ ಸಾಮುದ್ರಿಕಕ್ಕೆ ಸುಬ್ರಹ್ಮಣ್ಯನೇ ಗುರು.

## ಅಂಗೈಯಲ್ಲಿ ಗ್ರಹಗಳು

ಅಂಗೈಯಲ್ಲಿ ಮೇಲುಗಡೆ ಐದು ಬೆರಳುಗಳು. ಕಿರುಬೆರಳಿಗೆ ಬುಧನು, ಉಂಗುರದ ಬೆರಳಿಗೆ ಸೂರ್ಯನು, ಮಧ್ಯಮ ಬೆರಳಿಗೆ ಶನಿ, ತೋರಿಸುವ ಬೆರಳಿಗೆ ಗುರು. ಹೆಬ್ಬೆಟ್ಟಿಗೆ ಶುಕ್ರನು ಕರ ಮಧ್ಯದಲ್ಲಿ ಕುಜನು. ಆ ಬೆರಳಿನ ಬುಡದಲ್ಲಿ ಆ ಗ್ರಹದ ದಳವಿರುತ್ತೆ.

ಈ ಗ್ರಹಗಳ ಬಲ ಈ ದಳದ ಮೃದು ಉಬ್ಬಿರುವಿಕೆಯಿಂದ ಅರಿವು. ಉಬ್ಬಿದ್ದರೆ ಬಲ ಹೆಚ್ಚು. ಅಡಗಿದರೆ ಬಲ ಕಡಿಮೆ.

ಕರ ಬುಡದಿಂದ ಗುರುವಿನ ಬೆರಳಿಗೆ ಹೋಗುವುದೇ ಜೀವ ರೇಖೆ ಅಥವಾ ವಯೋರೇಖೆ. ಸೂರ್ಯನ ಬೆರಳಿನಿಂದ ಕೆಳಕ್ಕೆ ಹರಿಯುವುದು ರವಿರೇಖೆ, ವಿಧ್ಯಾರೇಖೆ, ಉದ್ಯೋಗ ರೇಖೆ. ಇವೆರಡಕ್ಕೂ ಮಧ್ಯೆ ಹೋಗುವುದು ಧನರೇಖೆ, ಇದು ಗುರು ಬೆರಳಿನಿಂದ ಹೋದರೆ ಧನಿ. ಶನಿ ಬೆರಳಿಗೆ ಹೋದರೆ ದರಿದ್ರ. ಚಂದ್ರನಿಂದ ಹೊರಡುವ ರೇಖೆಯೇ ವ್ಯಾಪಾರ ರೇಖೆ. ಬುಧನಿಂದ ಹೊರಡುವುದು ಸ್ನೇಹರೇಖೆ, ಬುದ್ಧಿ ರೇಖೆ, ಮೇಲುಗಡೆ ಅಡ್ಡವಾಗಿ ಹರಿಯುವುದು ಆಯುರೇಖೆ, ಕುಜನದು ಮದುವೆ ರೇಖೆ.

ನಾಲ್ಕು ಬೆರಳುಗಳಲ್ಲಿ ಮೂರು ಮೂರು ಭಾಗಗಳು ಅಥವಾ ಪರ್ವಗಳು. ಹನ್ನೆರಡು ಪರ್ವಗಳಾದವು. ಈ 12 ಭಾಗಗಳಲ್ಲಿ ಮೇಷಾದಿ 12 ಲಗ್ನಗಳನ್ನು ಎಣಿಸಿದರು. ಮುಂದೆ ಜೀವನದ ಈಶ್ವರನಿಂದ ತಂದೆಯಾದ ಈಶ್ವರನಿಂದ ಕಲಿತರು.

ಗ್ರಂಥ ವಿಸ್ತಾರ ಭಯದಿಂದ ಈ ಸಾಮುದ್ರಿಕ ಶಾಸ್ತ್ರದ ವಿಷಯ ಇಷ್ಟುಸಾಕು. ಇದರ ಮೇಲೆ ಬೇರೆ ಬೇರೆ ಋಷಿಗಳು ಗ್ರಂಥಗಳನ್ನು ಬರೆದಿದ್ದಾರೆ.

## ಅಗ್ನಿ ಕಾರಕ ಮಂಗಳ

'ಅಂಗಾರ' ಅಂದರೆ ಬೆಂಕಿ. ಇದನ್ನು ತೋರಿಸುವುದರಿಂದ 'ಅಂಗಾರಕ' ನೆಂದರು. ಈ ಅಗ್ನಿಗೆ ಮಗ ಇವನು. "ಆಗ್ನೇಯ". ಸುಬ್ರಹ್ಮಣ್ಯನು ಇದರ ಅಭಿಮಾನಿ ದೇವತೆ. ಆವನು ಯುದ್ಧ ಮಾಡಿ ದೇವತೆಗಳಿಗೆ ಜಯ ಕೊಡಿಸುವುದಕ್ಕೆ ಹುಟ್ಟಿದನು. ಯುದ್ಧಾಭಿಮಾನಿ 'ಪಾರ್ವತೀ' 'ದುರ್ಗಾ', 'ಚಾಮುಂಡಿ' ಈ ಗ್ರಹದ ದೇವತೆಗಳು.

ಅಗ್ನಿಗೆ ಕಾರಕ. ಅಗ್ನಿಯಲ್ಲಿ ಕೆಲಸ ಮಾಡುವವರಿಗೂ ಕಾರಕ. ಅಂದರೆ, ಶಸ್ತ್ರ ನಿರ್ಮಾಪಕರು, ಶಸ್ತ್ರ ವಿಧ್ಯಾ ಪ್ರವೀಣರು– ಯಂತ್ರ ನಿರ್ಮಾಣ ಮಾಡುವವರು. ಅಡಿಗೆ ಮತ್ತು ಅಡಿಗೆ ಮಾಡುವವರು ಹೆಂಗಸರಲ್ಲಿ ಪುರುಷನಿಲ್ಲದವರು. ಪುರುಷ ಚೇಷ್ಟೆಯಿಂದ ಕೂಡಿದ ಸ್ತ್ರೀಯರು.

ಈ ಗ್ರಹವು ಶುಭಕರವಿದ್ದರೆ ಮಂಗಳಕರ. ಸೌಭಾಗ್ಯವತಿ, ವಸ್ತುವಾಹನ ಆಭರಣಾದಿಗಳಿಂದ ಶೋಭಿತಳು. ದರ್ಪದಿಂದ ಪುರುಷನನ್ನು ಅಡಿಯಾಳಾಗಿ ತಾನೇ ಯಜಮಾನಿಯಾಗುವಳು ಆದರೆ ಪತಿವ್ರತೆಯು! ಗಂಡನನ್ನು ಬಿಟ್ಟು ಪರಪುರುಷನ ದೃಷ್ಟಿಕೂಡ ಇರದವಳು. ಗಿಡ್ಡಾಗಿರುವ ದೇಹವಿದ್ದು ಧೈರ್ಯ ಸಾಹಸದಿಂದ ಕೂಡಿದವಳು.

ಪುರುಷರಲ್ಲಿ ಯಂತ್ರಾಗಾರದ ಮಾಲೀಕರು, ವಾಹನಾದಿಗಳ ಸೌಲಭ್ಯ ಉಳ್ಳವರು. ರಾಜ ಅಥವಾ ರಾಜ ಸಮಾನರು. ಭೂಭಾಗ್ಯ ಸ್ವರ್ಣ ಭಾಗ್ಯವಿರುವವರು. ಅನ್ನದಾನಾದಿ ಧರ್ಮಿಷ್ಠರು. ಧೈರ್ಯ, ಸಾಹಸಾದಿಗಳಿಗೂ ವೀರ್ಯ ಶಾರ್ಯಾದಿಗಳಿಗೂ ಹೆಸರಾದವರು. ನಾಯಕರು ಈ ಗ್ರಹದ ಅಂಶದಲ್ಲಿ ಹುಟ್ಟುವರು. ಮಂತ್ರಸಾಧಕರು ಯತೀಶ್ವರರೂ ಈ ಯೋಗದಲ್ಲಿಯೇ ಹುಟ್ಟುತ್ತಾರೆ.

---

# 15

## ತಾರಾ ಪುತ್ರ – ಬುಧ

ಗುರುವಿನ ಹೆಂಡತಿ ತಾರೆ ಆದರೆ ಅವಳ ಮೇಲೆ ಚಂದ್ರನಿಗೆ ಕಣ್ಣು. ಒಮ್ಮೆ ಉದ್ಯಾನವನದಲ್ಲಿದ್ದಳು. ಒಳ್ಳೆಯ ಬೆಳದಿಂಗಳು. ಚಂದ್ರ, ಅದೂ ಪೂರ್ಣ ಚಂದ್ರ. ಬೆಳದಿಂಗಳಲ್ಲಿ ಇನ್ನೂ ಸುಂದರ ಆ ಮುಖ. ಚಂದ್ರನಿಗೆ ಅವಳ ಮೇಲೆ ಆಸೆ. ಅವಳನ್ನು ಹಾರಿಸಿಕೊಂಡು ಹೋದ.

ಮನೆಯಲ್ಲಿ ಹೆಂಡತಿಯಿಲ್ಲ. ಗುರುವುಗೆ ಕೋಪ. ಯೋಗದೃಷ್ಟಿಯಲ್ಲಿ ನೋಡಿದರು ಚಂದ್ರನಿಂದ ಈ ಕೆಲಸ ! ಅವರಿಗೆ ಕೋಪ ಬಂತು. 'ಕಳಿಸು' ಎಂದು ಚಂದ್ರನಿಗೆ ಹೇಳಿಕಳಿಸಿದರು. ಗುರುವಾದರೇನು? ಚಂದ್ರ ಕಳಿಸಲೇ ಇಲ್ಲ. ಯುದ್ಧ ಪ್ರಾರಂಭ ಆಗಿಯೇ ಬಿಟ್ಟಿತು. ದೇವತೆಗಳಲ್ಲಿಯೇ ಎರಡು ಪಾರ್ಟಿ. ಕೊನೆಯಿಲ್ಲ ಮೊದಲಿಲ್ಲ.

ಇದೇನು ವಿರಸ! ಬ್ರಹ್ಮನಿಗೂ ಕೋಪ ಬಂದಿತು. ಚಂದ್ರ ಬ್ರಹ್ಮನಿಗೆ ಹೆದರಿಕೊಂಡು ತಾರೆಯನ್ನು ವಾರಸು ಮಾಡಿದ. ಆದರೆ ತಾರೆ ಸರಿ ಮಗುವನ್ನು ಹೊರಗೆ ಹಾಕಿದಳು.

ಮಗು ತುಂಬಾ ಲಕ್ಷಣವಂತ. ಬುದ್ಧಿ ಗುಣಗಳಲ್ಲಿ ಅವನದು ಮೇಲುಗೈ. 'ನನ್ನ ಮಗು ಇದು' ಅಂತ ಗುರು. 'ನನ್ನ ಮಗು' ಅಂತ ಚಂದ್ರ ಇದು ವಿಪರೀತವಾಯಿತು! ಈ ಜಗಳದಿಂದ ಮಗನಿಗೆ ಹೇಳದಷ್ಟು ನಾಚಿಕೆ ಆಯಿತು.

ಅಮ್ಮನನ್ನು 'ಯಾರ ಮಗ ನಾನು' ? ಎಂದು ಕೇಳಿದ. ಅವಳು ಹೇಗೆ ಹೇಳುತ್ತಾಳೆ? ನಾಚಿಕೆ ! ಬ್ರಹ್ಮ ತಾರೆಯನ್ನು ಕರೆದು ರಹಸ್ಯವಾಗಿ 'ಹೇಳು' ಅಂದ. 'ಸೋಮನದೇ ಮಗು' ಅಂದಳು. ಆಗ ಚಂದ್ರ ಬಹಳ ಪ್ರೀತಿಯಿಂದ 'ಬಾ ಮಗ' ಎಂದು ಕರೆದು ಕೊಂಡು ಹೋದ. ಚಂದ್ರನಿಗೆ 'ಮಗ' ಎಂದರೆ ತುಂಬಾ ಪ್ರೀತಿ. ಆದರೆ ಮಗುವಿಗೆ ಚಂದ್ರನನ್ನು ಕಂಡರೆ ದ್ವೇಷ. ಇದು ಜಾರತ್ವದ ಫಲ. ಇದರಿಂದ ಈ ಗ್ರಹ ಸೂಳೆಗಾರಿಕೆ, ಹಾದರ, ವಿಟಪುರುಷರಿಗೆ ಕಾರಕನಾದ. ಜಾರತ್ವದಲ್ಲಿ ಇವನದು ಹೆಸರು.

ಬುದ್ಧಿ ಚುರುಕು. ಪಾದರಸದ ಹಾಗೆ ಇದರ ಬುದ್ಧಿ. ಇಂಗ್ಲೀಷಿನಲ್ಲಿ ಈ ಗ್ರಹಕ್ಕೆ 'Mercury' ಎಂದರು.

ಚಂದ್ರ ವಂಶದಲ್ಲಿ ಹುಟ್ಟಿದ ಮಹಾ ವಿಷ್ಣುವೇ ಶ್ರೀ ಕೃಷ್ಣ. ಇವನು ಪರಮಾತ್ಮ. ಇವನನ್ನೂ ಸಹ 'ಜಾರ ಚೋರ, ಭಜನ ಚೇಸಿತಿವೀ' ಎಂದು ತ್ಯಾಗರಾಜರು, ಹಾಡಿ ಹೊಗಳಿದರು. ಮತ್ತೊಬ್ಬನ ಹೆಂಡತಿಯಾದ ರಾಧೆ ಇವನ ಪ್ರೇಯಸಿ. ಇವನನ್ನು 'ಗೋಪೀಕಾಂತ' ಅಂದರು. ಈ ಬುಧನನ್ನು 'ವಿಟ್' 'ವಿಟ' ಅಂದರು.

## ಪಾಂಡಿತ್ಯಕಾರಕ

ಮನಸ್ಸಿನ ಚೈತನ್ಯ 'ಬುದ್ಧಿ'. ಇದನ್ನು ತೋರಿಸುವುದರಿಂದ 'ಬುಧ' ಅಂದರು. 'ಬುದ್ಧಿ' ಈ ಪದ ಬುಧನಿಂದ. 'ಭೋಧ' ಅಂದರೆ ಎಚ್ಚಿಸು, ಎಚ್ಚರಿಸುವುದು. ಬುದ್ಧ ಅಂದರೆ ಎಚ್ಚೆತ್ತವನು. ಬೆಳಕನ್ನು ಕಂಡವನು, ಜ್ಞಾನಿಯು. ಆದ್ದರಿಂದಲೇ 'ಭಗವಾನ್ ಬುದ್ಧ'ನಾದ ಸಿದ್ಧಾರ್ಥ.

ಬುದ್ಧಿಯ ಪರಿಣಾಮ ಪಾಂಡಿತ್ಯ. ಪಂಡಿತರು ಅಂದರೇನು? ಋಷಿಗಳು 'ಸಮದೃಕ್ ಪಂಡಿತೋ ಮತಃ' ಎಂದರು. ಸಮ ಭಾವನೆಯಿಂದ ನೋಡುವುದು

'ಸಮದೃಕ್'. ಕೆಟ್ಟದ್ದು ಒಳ್ಳೆಯದು, ಕಷ್ಟ ಸುಖ, ದುಃಖ ಹರ್ಷ, ಸಾವು ಬದುಕು, ಇಂಥಹ ವಿರುದ್ಧ ಗುಣಗಳನ್ನು ಸಮವಾಗಿ ನೋಡುವುದು, ಒಂದೇ ಪ್ರಾಧಾನ್ಯತೆ ಕೊಡುವುದು. ಇದರಿಂದ ಈ ಗ್ರಹ 'ಸಮಗ್ರಹ'. ಶುಭಾಶುಭ ಫಲ. ಎರಡೂ ಇವನ ಗುಣಗಳು.

ಗುಣಗಳಿಗೆ ಸಮಪ್ರಧಾನ್ಯತೆ ಇವನಲ್ಲಿ. ತನ್ನದೇ ಆದ ನಿರ್ದಿಷ್ಟ ಗುಣ ಇಲ್ಲ. ಕೆಟ್ಟವನೇ? ಅಲ್ಲ. ಒಳ್ಳೆಯವನೇ ? ಅಲ್ಲ. ಭಾವದ ಉದ್ರೇಕವಿಲ್ಲ. ಎಲ್ಲತರಹೆ ಗುಣಗಳನ್ನೂ ಸಮವಾಗಿ ಹೊಂದಿರುವವನು. ಆದಕ್ಕೇ ಋಷಿಗಳು 'ನಿರ್ಗುಣ' ಎಂದರು. ಪರಮಾತ್ಮನು 'ನಿರ್ಗುಣ'. ಮಹಾವಿಷ್ಣು, ಶ್ರೀ ಕೃಷ್ಣ ನಿರ್ಗುಣನು. ಎಲ್ಲರಲ್ಲಿಯೂ ಒಂದೇ ಬಳಕೆ. 'ಸಮಃ ಸರ್ವ ಭೂತನಾಂ ಯೋ ಮೇ ಭಕ್ತಃ ಸಮೇ ಪ್ರಿಯಃ' ಎಂದ ಶ್ರೀ ಹರಿ.

ಪ್ರೀತಿಗಾಗಿ ಏನೂ ಮಾಡುವುದಿಲ್ಲ, ದ್ವೇಷಕ್ಕಾಗಿಯೂ ಏನೂ ಮಾಡುವುದಿಲ್ಲ. ಕೆಲಸ ಏನೇ ಮಾಡಲಿ 'ಕೆಲಸ' ಎಂದು ಮಾಡುವುದು. ಪ್ರೀತಿ ದ್ವೇಷಗಳ ಬಂಧವಿಲ್ಲ. ಆದ್ದರಿಂದ ಈ ಗ್ರಹ 'ನಿರ್ಗುಣ' ಗ್ರಹ. "ಗುಣಸಾಮ್ಯೇ ನಿರ್ಗುಣಃ" ಎಂದರು.

**ಸಂಗದಿಂದ ಗುಣ**

ಗುಣವನ್ನೇ ನಿಗದಿ ಮಾಡದಿದ್ದರೆ ಹೇಗೆ ? ಸ್ವಂತ ಗುಣಗಳನ್ನಂತೂ ಹೊಂದಿಲ್ಲ. ಆದರೆ ಇದರ ಗುಣಗಳನ್ನು ಹೊಂದಬಹುದು. ಸಂಗಕ್ಕೆ ಅನುಗುಣ ಈ ಗುಣ, ಕೆಲಸಕ್ಕೂ ಅನುಗುಣ. ಅಗ ಆ ಕೆಲಸಕ್ಕೆ ಆ ಗುಣದ ಉತ್ಪತ್ತಿ. ಸಂದರ್ಭ, ಆವರಣಗಳ ಮೇಲೆ ಇವನ ಗುಣ.

ಸಂಗದಿಂದ ಇವನ ಗುಣ ಖಚಿತ. ಸಂಗ ಎಂದರೆ ಮೈತ್ರಿ. "ಮೈತ್ರಿ" ಇವನ ತತ್ವ. ಇವನನ್ನು 'ಮಿತ್ರಗ್ರಹ' ಅಂದರು.

ಈ ಗುಣ ಶ್ರೀ ಕೃಷ್ಣನಲ್ಲಿ ಚೆನ್ನಾಗಿ ಕಾಣುತ್ತದೆ. ಹಳ್ಳಿಯಲ್ಲಿ ಹಳ್ಳಿಗನಂತೆ, ಗೊಲ್ಲರಲ್ಲಿ ಗೋಲ್ಲನಂತೆ. ಅವರ ಸಂಗಡ ಇವನ ಸ್ನೇಹ. ಅವರ ಹಾಗೆಯೇ

ಆಟ. ಎಲ್ಲವೂ ಅವರಿಗೆ ಸಮ. ಶೂದ್ರರ ಹುಡುಗರ ಜೊತೆ ಶೂದ್ರರಂತೆ ದನಕಾಯಲೂ ಸಿದ್ಧ. ಸೂತನಂತೆ ಗಾಡಿ ಹೊಡೆಯಲೂ ಸಿದ್ಧ. ಪಂದ್ಯದಲ್ಲಿ ಸೋತು ಮಿತ್ರನನ್ನು ಬೆನ್ನಮೇಲೆ ಹೊರಲೂ ಹಿನ್ನಡೆಯಿಲ್ಲ. ಏನೇ ಮಾಡಲಿ ಆಸೆ, ಪ್ರೀತಿಯಿಂದ ಮಾಡುತ್ತಾನೆ.

ಬ್ರಹ್ಮ ಮೋಹ ಮಾಡಿದರೆ, ಇವನು ಬ್ರಹ್ಮನನ್ನೇ ಮೋಹ ಮಾಡದ! ಬ್ರಹ್ಮನೇ ಅಡ್ಡಬಿದ್ದು ತನ್ನ ಹೃದಯ ದೇವರಾದ ಶ್ರೀಕೃಷ್ಣನನ್ನು ಹೊಗಳಿದ. ಹುಡುಗರ ಜೊತೆ ಹುಡುಗು. ದೇವತೆಗಳ ಜೊತೆ ದೇವತೆ. ಋಷಿಗಳ ಹತ್ತಿರ ಋಷಿ, ಜ್ಞಾನಿಗಳ ಬಳಿ ಜ್ಞಾನಿ.

ಎಲ್ಲದರಲ್ಲಿಯೂ ಇವನೇ ಮುಂದು. ಇವನೇ ಎಲ್ಲದಕ್ಕೂ ಮೂಲ. ಇವನೇ ಎಲ್ಲರಿಗೂ ಗುರು. ಗುರುಗಳೆಲ್ಲರೂ ಈ ಮೂಲಗುರುವನ್ನೇ ಪೂಜೆಮಾಡುತ್ತಾರೆ.

ಕೆಟ್ಟವರಿಗೆ ಕೆಟ್ಟವನು. ಒಳ್ಳೆಯವರಿಗೆ ಒಳ್ಳೆಯವನು. ಈ ಗ್ರಹ ಯಾರ ಜೊತೆ ಇರುತ್ತಾನೆ? ಇದೇ ಅವನ ಬುದ್ದಿ. ಕಳ್ಳರ ಜೊತೆ ಕಳ್ಳತನ! ಬೆಣ್ಣೆ ಕದಿಯಲಿಲ್ಲವೇ? ಈ ಗ್ರಹಕ್ಕೆ 'ಚೋರ ಗ್ರಹ' ಎಂದೂ ಕರೋಯುತ್ತಾರೆ. ಕಳ್ಳ ಸಿಕ್ಕಿದರೆ, ಸುಳ್ಳೇ ಅವನು ಹೇಳುವುದು. 'ಸುಳ್ಳು' ಈ ಗ್ರಹದ ಗುಣ. ಮಣ್ಣು ತಿನ್ನಲಿಲ್ಲ ಎಂದು ಸುಳ್ಳು ಹೇಳಲಿಲ್ಲವಂ? ಬಾಯಿ ತೆಗೆದು ತೋರಿಸಿದರೆ ಯಶೋದೆಗೆ ಕಂಡದ್ದೇನು? ಇಡೀ ಜಗತ್ತು!

ಮಗು ತರಹೆ ಇವನ ಗುಣ. ಅಸ್ಥಿರ ಮನಸ್ಸು. ಪರಮಾತ್ಮನ ಈ ವಿಚಿತ್ರ ಗುಣ ರಾಕ್ಷಸ, ಹಿರಣ್ಯಕಶಿಪುವಿನ ಬಾಯಲ್ಲಿ!

'ಭಜತಂ ಭತಜಮಾನಸ್ಯ ಬಾಲಸ್ಯೈವ ಅಸ್ಥಿರಾತ್ಮನಃ' ಎಂದು ಹಾಸ್ಯಮಾಡಿದ. ಯಾರು ಕರೆದರೆ ಅವರ ಹಿಂದೆ ಇವನು. ಕರೆಯದಿದ್ದರೆ? ಬರುವುದೇ ಇಲ್ಲ. ಇದರಿಂದ ಈ ಗ್ರಹಕ್ಕೆ 'ಬಾಲ್ಯದ ಗ್ರಹ' 'ವತ್ಸರಾಜ' ಅಂದರು. 'ವತ್ಸ' ಎಂದರೆ 'ಬಾಲಕ' ಎಂದರ್ಥ.

## ಸಂಕೇತಗಳು

ಮೊಟ್ಟ ಮೊದಲನೆಯ ಸಂಕೇತಗಳು ಒರಟಾದ ಚಿತ್ರಗಳು. ನಂತರ ಚಿಹ್ನೆಗಳು. ನಂತರ ನವೀನ ಪರಿಶುದ್ಧ ಅಕ್ಷರಗಳು. ಈ ಅಕ್ಷರಗಳನ್ನು ಲಿಪಿ ಎಂದರು. ಈ ಬುಧನೇ ಲಿಪಿಕಾರಕನು. ಇದನ್ನು ಬರೆಯುವನು ಲೇಖಕನಾದನು. ಲೇಖನ, ಲೇಖಕ, ಲಿಪಿ ಇವೆಲ್ಲಕ್ಕೂ ಬುಧನೇ ಕಾರಕ. ಮೊತ್ತಮೊದಲಿನ ಮಾನವ, ಮಾತೇ ಇಲ್ಲದ ಜನಾಂಗ. ಈ ಜನಗಳಿಗಾಗಿ ಸಂಜ್ಞೆಗಳು ಅಗತ್ಯ. ಮಾತಿಲ್ಲದವರು ಎರಡು ವಿಧ. ಪರಸ್ಪರ ಕಾಣದಂತೆ ದೂರದಲ್ಲಿದ್ದರೆ ಆಗ ಇದು ಉಪಯೋಗಕ್ಕೆ ಬರುತ್ತೆ. ಅವರ ಮಾತು ತಿಳಿಯದು. ಆಗ ಆ ಜನಗಳಿಗೆ ಸುದ್ದಿ ತಿಳಿಸಲು ಸಹ ಇದು ಉಪಯೋಗವಾಗುವುದು. ಹಾಗಿಲ್ಲ ಹುಟ್ಟು ಮೂಕರಿಗೆ ಈ ಸೇಕೇತ ಶಾಸ್ತ್ರ ಅಗತ್ಯ. ಬುಧನು ಈ ರೀತಿಯಾದ ಮೂಕರಿಗೂ ಈ ಸಂಕೇತ ಶಾಸ್ತ್ರ ಅಗತ್ಯ. ಬುಧನು ಈ ರೀತಿಯಾದ ಮೂಕರಿಗೂ, ಮೂಕ ಪ್ರಾಣಿಗಳಿಗೂ ಕಾರಕನಾದನು. ಈ ಸಂಕೇತ ಶಾಸ್ತ್ರಕ್ಕೂ ಅವನೇ ಕಾರಕ.

## ಗಣಿತ ಶಾಸ್ತ್ರ ಕಾರಕ

ಹುಲಿ ಚಿತ್ರ ನೋಡಿದರೆ ಹುಲಿ ಇದೆ ಎಂದು ಗೊತ್ತಾಗುವುದು. ಆದರೆ ಎಷ್ಟು ಹುಲಿಗಳಿವೆ? ಇದು ಹೇಗೆ ಗೊತ್ತಾಗುವುದು? ಎರಡು ತಲೆ ಬರೆದರೆ ಗೊತ್ತಾಗುವುದು. ಒಂದೇ ಚಿಹ್ನೆ ಎರಡು, ಮೂರು,ನಾಲ್ಕು ಸಲ ಹೀಗೆ ಅದರ ಸಂಖ್ಯೆ ಗೊತ್ತಾಗುವುದು. ೧ರ ಪಕ್ಕದಲ್ಲಿ ೧ ಹೀಗೆ ಸಂಜ್ಞಾಶಾಸ್ತ್ರದಲ್ಲಿ ಅಂಕಿಗಳು ಜಾರಿಗೆ ಬಂದವು. ಆದುದರಿಂದ ಸಂಜ್ಞೆಗಳು ರೂಪದ ಅಂಕಗಳು, ಈ ಅಂಕಗಳಿಗೂ ಬುಧನೇ ಕಾರಕನು.ಈ ಅಂಕ ಶಾಸ್ತ್ರಕ್ಕೆ 'ಅಂಕಗಣಿತ' ಅಂದರು. ಈ ಶಾಸ್ತ್ರಕ್ಕೂ ಇವನೇ ಕಾರಕನು.

ಬುಧನು ಗಣಿತಜ್ಞನಾದನು. ಲೇಖಕನಾದನು. ಲೇಖನ ಸಾಮಗ್ರಿಗಳಾದ ಲೇಖಣಿ, ಶಾಯಿ, ಟೈಪ್ ರೈಟರ್. ರೋಟರಿ, ಮುದ್ರಣ ಯಂತ್ರ, ಮುದ್ರಣಾಲಯ ಇವುಗಳೆಲ್ಲಕ್ಕೂ ಬುಧನೇ ಕಾರಕನಾದನು.

## ಗ್ರಂಥಕಾರಕ

ಈ ಸಂಕೇತವನ್ನು ರವಾನಿಸಬೇಕಾದರೆ ಹೇಗೆ? ಹಿಂದಿನ ಕಾಲದಲ್ಲಿ ಗಿಡಗಳ ಎಲೇ ಖ ಮೇಲೆ ಉಗುರಿನಲ್ಲಿ ಬರೆಯುತ್ತಿದ್ದರು. ಶಕುಂತಲೆ ದುಷ್ಯಂತನಿಗೆ ಬರೆದ ಹಾಗೆ. ಈ ಎಲೆಯೂ ಒಂದ ಲೇಖನ ಸಾಮಗ್ರಿಯಾಯಿತು. ಇದಕ್ಕೆ 'ಪತ್ರ' ಎಂದರು. ತಾಳೆಗರಿ ಇದ್ದಾಗ 'ತಾಳ ಪತ್ರ' ಎಂದರು.

ಈ ಬುಧನು ಪತ್ರಕಾರಕ, ಅಷ್ಟೇ ಅಲ್ಲ. ಆ ಪತ್ರಗಳು ಬೆಳೆಯುವ ಮರಗಳಿಗೂ ಕಾರಕನಾದನು. ಈ ಮರಗಳು ದಟ್ಟವಾಗಿ ಬೆಳೆಯುವ ಕಾಡುಗಳಿಗೂ ಕಾರಕನಾದನು ಆಟಕ್ಕೆ ಬೇಕಾದ ಉದ್ಯಾನವನಕ್ಕೂ ಕಾರಕನಾದನು.

ಒಂದೇ ವಿಚಾರಕ್ಕೆ ಸೇರಿದ ಪತ್ರಗಳ ಸಮೂಹವೇ ಗ್ರಂಥವು. ಪುಸ್ತಕ ಅಂದರು. ಬುಧನು ಗ್ರಂಥ ಕಾರಕನಾದನು.

ಜ್ಞಾನವುಳ್ಳವರು ಅದನ್ನು ಗ್ರಂಥರೂಪದಲ್ಲಿ ಬರೆದಿಟ್ಟರು. ಜನಗಳು ಅದನ್ನು ಓದಿದರು. ಅರ್ಥಮಾಡಿಕೊಂಡರು. ಬರೆಯವುದಕ್ಕೆ ಪದಗಳು ಬೇಕು. ಚಿತ್ರಬರೆದರೆ ಗುಣಗಳೆಲ್ಲಾ ತಾವಾಗಿಯೇ ಮನಸ್ಸಿನಲ್ಲಿ ಚಿತ್ರಿತವಾಗುವುದು. ಅಕ್ಷರಗಳಲ್ಲಿ ಬರೆದರೆ ಹೇಗೆ ಚಿತ್ರ ಆಗುವುವು? ಆಗ ಗುಣ ಸಾಮ್ಯವಿರುವ ಪ್ರಾಣಿಗಳ ಹೆಸರಿಂದ ಗೊತ್ತಾಗುತ್ತದೆ. ಸಿಂಹದಂತೆ ಧೈರ್ಯ, ಆನೆಯಂತೆ ಬಲ ಇತ್ಯಾದಿ. ಗುಣಸಾಮ್ಯ ತೋರಿಸುವುದಕ್ಕೆ ಉಪಮಾನ, ಅಂದರೆ 'ಹತ್ತಿರದ ಅಳತೆ' ಎಂದರ್ಥ. ಇದು ಒಂದು ಅಲಂಕಾರ. ಈ ಅಲಂಕಾರ ಶಾಸ್ತ್ರಕ್ಕೂ ಬುಧನೇ ಕಾರಕನು. ಇದಕ್ಕೆ 'ಸಾಹಿತ್ಯ' ಎಂದರು. ಈ ಸಾಹಿತ್ಯಕ್ಕೂ ಈ ಬುಧನೇ ಕಾರಕನು.

ಈ ಗ್ರಂಥಗಳಲ್ಲಿ ಒಬ್ಬ ಮನುಷ್ಯನ ವಿಚಾರ ಇದ್ದೀತು. ದೇಶದ ಚರಿತ್ರೆ ಇರಬಹುದು. ಕಲ್ಪನಿಕ ಸನ್ನಿವೇಶಗಳಿಂದ ನೀತಿ ತೋರಿಸಬಹುದು. ಈ ಕಾಲ್ಪನಿಕ ಗ್ರಂಥಕ್ಕೆ 'ಕತೆಗಳು' ಎಂದರು. ಈ ಕತೆಗಳಿಗೂ, ಈ ಬುಧನೇ

ಕಾರಕನಾದನು. ಶ್ರೀಕೃಷ್ಣನನ್ನು ಪೂಜೆ ಮಾಡಬೇಕಾದರೆ ಈ ಕತೆಗಳಿಂದ. ಈ ಮಾರ್ಗ ಅವನಿಗೆ ಬಹಳ ಪ್ರಿಯ. ಆದುದರಿಂದ 'ಹರಿಕಥೆ' ಎಂದಾಯಿತು. ರೂಢಿಯಲ್ಲಿ ಶಿವಕಥೆ ಎನ್ನುವುದಿಲ್ಲ.

## ಭಕ್ತಿಕಾರಕ

ಈ ಬುಧನು ತನ್ನ ಸ್ವೇಚ್ಛೆಯಿಂದ ಏನೂ ಮಾಡುವುದಿಲ್ಲ. ನಾರಾಯಣನು ಸಮುದ್ರದಲ್ಲಿ ಯೋಗನಿದ್ರೆಯಲ್ಲಿರುತ್ತಾನಂತೆ? ಹಾಗೆಯೇ ಇದು.

ಅವನನ್ನು ಕೇಳಬೇಕು, ಕೇಳಿಕೊಳ್ಳಬೇಕು. ಬೇಡ ಬೇಕು. ದೈನ್ಯದಿಂದ ಬೇಡಿರೆ ಒಂದು ಕೆಲಸ ಮಾಡುವನು. ಈ ದೈನ್ಯ ಬೇಡಿಕೆಗೆ 'ಭಕ್ತಿ' ಅಂದರು. ಆದುದರಿಂದ ಭಕ್ತಿಗೂ, ಭಕ್ತರಿಗೂ, ಭಕ್ತರಿಗೂ ಈ ಬುಧನೇ ಕಾರಕನಾದನು. ಶ್ರೀಹರಿಯು ಭಕ್ತಪ್ರಿಯನು. ಬೇಡುವುದು ಇನ್ನೂ ದೈನ್ಯದಿಂದ ಬೇಡುವುದು, ಕಾಲಿಗೆ ಬೀಳುವುದು. ಬಿದ್ದು 'ದಮ್ಮಯ್ಯ' ಎಂದು ಗೋಗರೆಯುವುದು, 'ನಮಸ್ಕಾರ'. ಈ 'ನಮಸ್ಕಾರ'ಕ್ಕೂ ಈ ಬುಧನೇ ಕಾರಕನು. ಬೀಳಿಸಿಕೊಳ್ಳುವ ಪಾದಗಳಿಗೂ ಇವನೇ ಕಾರಕನು. ಇವನು 'ಪಾದಕಾರಕ'ನಾದನು.

ಹೊಗಳುವುದು ಸ್ತೋತ್ರ. ಒಂದು ವಿಶೇಷ ತೆರನಾದ ಸ್ತೋತ್ರಕ್ಕೆ 'ಮಂತ್ರ' ಅಂದರು. ಈ ಮಂತ್ರ ಗ್ರಂಥಕ್ಕೆ ವೇದ ಅಂದರು. ಈ ವೇದಗಳಿಗೂ ಬುಧ ಕಾರಕನಾದನು.

ನಾಲ್ಕು ಲಕ್ಷ ಗ್ರಂಥಗಳಿಂದ ಕೂಡಿದ್ದು ಹದಿನೆಂಟು ಪುರಾಣಗಳು. ಇಲ್ಲಿ ದೇವರ ಕಥೆಗಳು, ಶ್ರೀಕೃಷ್ಣನ ಕಥೆಗಳು. ಬೇಡಿದಾಗ ಭಕ್ತರಿಗೆ ಮಾಡಿದ ಸಹಾಯದ ಅಚ್ಚರಿಯ ವರ್ಣನೆಗಳು, ಇವೇ ಈ ಪುರಾಣ ವಿಷಯ. ಭಾರತೀಯ ಜನಗಳ ರೀತಿ ನೀತಿ ಸಂಸ್ಕೃತಿಗಳ ಕುರುಹು ಈ ಪುರಾಣ. ಈ ಗ್ರಂಥಗಳಿಗೂ ಈ ಬುಧನೇ ಕಾರಕನು.

ಕಾಲಿಗೆ ಬಿದ್ದು ಬೇಡಿದರೆ ಒಲ್ಲೆನೆಂಬುವರು ವಿರಳ. ಯಾರಾದರೂ

ಕಾಲಿಗೆ ಬಿದ್ದರೆ ಹೃದಯದಲ್ಲಿ ಕನಿಕರ ಹುಟ್ಟುತ್ತದೆ. ಚಿತ್ತದಲ್ಲಿ ಸಹಾಯ ಮಾಡಬೇಕು ಎನ್ನಿಸುತ್ತೆ. ಈ ಪಾದಕ್ಕೂ ಹೃದಯಕ್ಕೂ ಮತ್ತು ಬುದ್ಧಿಗೂ ಒಂದು ನಿಕಟ ಸಂಬಂಧ. ಈ ಮೂರು ಸ್ಥಾನಗಳಿಗೂ ಈ ಬುಧನೇ ಕಾರಣ, ಕಾರಕನು.

ಈ ಗ್ರಹದ ಅಧಿದೇವತೆಯಾದ ಶ್ರೀ ಕೃಷ್ಣನೂ ಹೃದಯದಲ್ಲಿ ವಾಸಮಾಡುತ್ತಾನೆ. ಅವನ ಪಾದಗಳನ್ನು ಭಕ್ತಿಯಿಂದ ಪೂಜಿಸುತ್ತಾರೆ. ಅವನು ಬುದ್ಧಿಯಲ್ಲಿ ಅಸಮಾನನು. ಚಿತ್ತ ಶಕ್ತಿ 'ಚೈತ್ಯನು'.

ವೇದಗಳಲ್ಲಿಯ ಮಂತ್ರಗಳಿಗೆ ಬುಧನು ಕಾರಕನು. ಮಂತ್ರಗಳಲ್ಲಿ ದೇವರನ್ನು ಸತ್ಕರಿಸುವ ಕ್ರಮವನ್ನು ಹೇಳುತ್ತದೆ. ಅಂತೆಯೇ ಮಿತ್ರರನ್ನೂ ಸತ್ಕರಿಸಲೂ 'ಆಮಂತ್ರಣ' ಎಂದರು. ಈ ಬುಧನೇ ಅದರ ಕಾರಕನು.

## ಮಂತ್ರ–ತಂತ್ರ–ರಾಜಕಾರಣ

ಯಾವರೀತಿ ದೇವತೆಗಳನ್ನು ಪೂಜಿಸಬೇಕು? ಇದನ್ನು ತಿಳಿಸುವ ಶಾಸ್ತ್ರಕ್ಕೆ 'ಮಂತ್ರಶಾಸ್ತ್ರ'ವೆಂದರು. ಇದನ್ನು ವಿಶೇಷ ರೀತಿಯಾದ ಮಂತ್ರಗಳಲ್ಲಿ ಉಪಚಾರಗಳಲ್ಲಿ ಪೂಜೆ ಮಾಡುವುದಕ್ಕೆ 'ತಂತ್ರ' ಶಾಸ್ತ್ರವೆಂದುಹೆಸರು.

ಈ ಮಂತ್ರ–ತಂತ್ರ ಶಾಸ್ತ್ರಗಳಿಗೂ ಈ ಬುಧನೇ ಕಾರಕನು.

ಈ ಬುಧನು ಬುದ್ಧಿಗೆ ಕಾರಕನು. ದೈಹಿಕ ಬಲ ಇವನದು ಅಲ್ಲ. ಆದುದರಿಂದ ತನ್ನ ಬುದ್ಧಿ ಬಲದಿಂದ ಇವನು ಗೆಲ್ಲುತ್ತಾನೆ. ದೈಹಿಕ ಬಲವುಳ್ಳ, ಧನ ಬಲವುಳ್ಳ, ಸೈನ್ಯ ಬಲವುಳ್ಳ ರಾಜನನ್ನು ಆಸ್ರಯಿಸುತ್ತಾನೆ. ರಾಜ್ಯಪಾಲನೆ ಮಾಡುವ ರೀತಿ–ನೀತಿಗಳನ್ನು ತನ್ನ ಬದ್ಧಿವಂತಿಕೆಯಿಂದ ತೋರಿಸುತ್ತಾನೆ. ಇವನು ಅವನಿಗೆ'ಮಂತ್ರಿ' ಆಗುತ್ತಾನೆ. ಮಂತ್ರಕೊಡುವವನು ಮಂತ್ರಿ. ಸಲಹೆ ಈ ಮಂತ್ರ. ಅವರ ಸಮೂಹವೇ 'ಮಂತ್ರಿಮಂಡಲ'. ಈ ಮಂತ್ರಿಮಂಡಲಕ್ಕೂ ಈ ಬುಧನೇ ಕಾರಕನಾದನು.

ಈ ಬುಧನನ್ನು ಪಾದಗಳಿಗೆ ಕಾರಕನೆಂದರು. ಈ ಪಾದಗಳಲ್ಲಿ

ನಡೆಯುತ್ತಾರೆ. ಬೆಡಗು ಬಿನ್ನಾಣಗಳನ್ನು ತೋರಿಸುತ್ತಾರೆ. ಈ ನಡೆಯಲ್ಲಿ ಕಲೆಯನ್ನು ತೋರಿಸುತ್ತಾರೆ. ಇದಕ್ಕೆ 'ನಾಟ್ಯ' ಅಂದರು. ಇದು ಸಂತೋಷಕ್ಕೆ ಜಯ ಪ್ರಾಪ್ತಿ ಆದುದಕ್ಕೆ, ಈ ರೀತಿ ಕುಣಿಯುತ್ತಾರೆ. ಶ್ರೀಕೃಷ್ಣನು ಕಾಳಿಂಗನ ಹೆಡೆಗಳ ಮೇಲೆ ನಾಟ್ಯವಾಡಿದ.

ಅನುಕರಣ ಇವನ ಗುಣ. ಇದಕ್ಕೆ ಇತರರ ಭಾವದ ರಸಜ್ಞಾನ ಬೇಕು. ವಿಶಿಷ್ಟ ರಸಗಳಿಗೂ ಈ ಬುಧನೇ ಕಾರಕನು. ಆದುದರಿಂದ ಇವನನ್ನು ಪಾದರಸಕ್ಕೆ ಹೋಲಿಸಿದರು. ರಸಗಳ ಶಾಸ್ತ್ರಕ್ಕೆ ರಾಸಾಯನಿಕ ಶಾಸ್ತ್ರವೆಂದರು. ಈ ರಾಸಾಯನಿಕ ಶಾಸ್ತ್ರಕ್ಕೂ ಇವನೇ ಕಾರಕನಾದನು. ರಾಸಾಯನಿಕ ಶಾಸ್ತ್ರಕ್ಕ 'Chemistry' ಅಂದರು. ರಸಗಳಿಂದ ಔಷಧಗಳನ್ನು ತಯಾರಿಸುತ್ತಾರೆ. ಆದುದರಿಂದ ಈ ರಸ ಔಷದಿಗಳಿಗೂ ಇವನೇ ಕಾರಕ.

---

# 16

## ಸಂಖ್ಯಾ ಶಾಸ್ತ್ರ

ಗಣಿತ ಶಾಸ್ತ್ರಕ್ಕೆ ಬುಧನು ಕಾರಕನು. ಇದರಿಂದ ಭೂತ, ಭವಿಷ್ಯತ್, ವರ್ತಮಾನ ವಿದ್ಯಮಾನಗಳನ್ನು ತಿಳಿಸುವ ಜ್ಯೋತಿಷ್ಯದ ಭಾಗವೇ ಅಂಕಶಾಸ್ತ್ರ ಅಥವ ಸಂಖ್ಯಾ ಶಾಸ್ತ್ರ.

ಲಿಪಿಗಳಿಗೂ ಸಂಖ್ಯೆಗಳಿಗೂ ಒಂದು ಸಂಬಂಧವನ್ನು ಕಲ್ಪಿಸಿದರು. ಅಕ್ಷರ ಸಂಖ್ಯಾಶಾಸ್ತ್ರಕ್ಕೆ ಜೈನರು ವಿಶೇಷ ದುಡಿದಿದ್ದಾರೆ. ಗ್ರಹಗಳಿಗೆ ಸಂಖ್ಯೆಗಳನ್ನು ಕೊಟ್ಟರು.

ಶನಿಗೆ 1, (ಬುಧ–ಗುರು) 2, (ಕುಜ–ಶನಿ) 3, (ಬುಧ–ಚಂದ್ರ) 4, ಗುರುವಿಗೆ 5, (ಕುಜ–ಶುಕ್ರ) 6, ರಾಹುವಿಗೆ 7, (ಬುಧ–ಶನಿ) 8, ಸೂರ್ಯನಿಗೆ 9, (ಗುರು–ಶನಿ) 10,(ಶುಕ್ರ–ಶನಿ) 11, (ಶುಕ್ರ–ಕುಜ) 12, ಶುಕ್ರ ೦, ಚಂದ್ರ 15, ಬುಧ 24, ಗುರು25, ರವಿ 30.

ಈ ರೀತಿ ಗ್ರಹಗಳಿಗೇ ವಿಶೇಷ ಸಂಖ್ಯೆಗಳನ್ನು ಕೊಟ್ಟರು. ಇದಕ್ಕನು ಗುಣವಾಗಿ 18 ಪುರಾಣಗಳನ್ನೂ ಬರೆದರು. ಅಧ್ಯಾಯಗಳ ಸಂಖ್ಯೆಗೂ ಅದರಲ್ಲಿ ಹೇಳಿರುವ ವಿಷಯಕ್ಕೂ ನಿಕಟ ಸಂಬಂಧವನ್ನು ತೋರಿಸಿದರು.

ಈ ಅಂಕಿಗಳ ಮಹತ್ವ, ಪ್ರಯೋಜನ ಅಷ್ಟು ಇಷ್ಟು ಎನ್ನುವಂತಿಲ್ಲ. ಅಂಕಿಗಳಿಗೆ ದೇವತ್ವದ ಮಹತ್ವವನ್ನು ಕೊಟ್ಟರು. ಇಟಲಿ, ಜರ್ಮನಿ, ಈಜಿಪ್ಟ್, ಇಂಡಿಯಾ ಎಲ್ಲೆಡೆಗಳಲ್ಲಿಯೂ ಅಂಕಿಗಳನ್ನು ದೇವರೆಂದು ಪೂಜಿಸುತ್ತಾರಂತೆ!

ಯಂತ್ರ-ಮಂತ್ರ ಶಾಸ್ತ್ರಗಳಲ್ಲಿ, ಈ ಸಂಖ್ಯೆಗೆ ಮಹತ್ವ ಕೊಟ್ಟು ಸಹಸ್ರನಾಮ, ಅಷ್ಟೋತ್ತರ ಇತ್ಯಾದಿಗಳನ್ನು ರಚಿಸಿದರು. ಆದುದರಿಂಲೇ ಈ ಸ್ತೋತ್ರಗಳನ್ನು ನಾವೇ ಸ್ವತಃ ರಚನೆಮಾಡಿ ಪೂಜೆಮಾಡಬಾದು. ನಾವು ಸ್ತೋತ್ರ ರಚನೆಮಾಡುವಾಗ ಈ ಸಂಖ್ಯಾ ಶಾಸ್ತ್ರಕ್ಕೆ ಅನುಗುಣವಾಗಿರುವುದಿಲ್ಲ. ಅದು ಮಂತ್ರ ಆಗದು.

ಈ ಸಂಖ್ಯಾ ಶಾಸ್ತ್ರವನ್ನು ಅರಬ್ಬೀಯರಲ್ಲಿ 'ರಮಲ' ಅಂದರು. ಇಂಗ್ಲಿಷ್‌ನಲ್ಲಿ Numerology ಅಂದರು. ಆದರೇ ರಮಲ ಮತ್ತು ಹಿಂದೂ ಸಂಖ್ಯೆಗಳು ಒಂದಕ್ಕೊಂದು ಸಮ ಆದೀತು. ಇಂಗ್ಲೀಷರ ಕೆಲವು ಅಂಕಿಗಳು ಮಾತ್ರ ಸಮಾವಾಗಿವೆ. ಇಂಗ್ಲೀಷರು ಸಂಖ್ಯೆಗಳನ್ನು ಅವನ ಬೈಬಲ್ಲಿಗೆ ಅನುಗುಣವಾಗಿ ಜೋಡಿಸಿಕೊಂಡರು.

ಹುಟ್ಟಿದ ತಾರೀಖಿನ ಸಂಖ್ಯೆಯಿಂದ ಅವನ ಗ್ರಹವನ್ನು ಹಿಡಿದು ಫಲಗಳನ್ನು ಹೇಳಿದರು. ಹುಟ್ಟಿದ ವರ್ಷಗಳಿಂದ ಫಲಗಳನ್ನೂ ಹೇಳಿದರು. ವರ್ಷೇ ವರ್ಷದ ಸಂಖ್ಯೆಗಳಿಂದಲೂ ಜೀವನದ ಫಲಗಳನ್ನು ಹೇಳಿದರು.

ಹಿಂದೂ ಶಾಸ್ತ್ರದಲ್ಲಿ ಸಂಖ್ಯೆಗಳಷ್ಟಕ್ಕೂ ಗ್ರಹಗಳು. ದ್ವಿಗ್ರಹಗಳು ತ್ರಿಗ್ರಹಗಳು. ಲಕ್ಷೋಪಲಕ್ಷ ಸಂಖ್ಯೆಗಳಿಗೂ ಫಲಗಳನ್ನು ಹೇಳಿದರು ಹೇಗೆ? ಉದಾಹರಣೆಗೆ 13. ಇದರಲ್ಲಿ 10-3 ಇದೇ. 10-ಗುರು ಶನಿ, 3- ಕುಜ ಶಿನಿ 13 (ಗುರು-ಕುಜ-ಶನಿ) ಮೊದಲಿನ ಸ್ಥಾನ ಗುರುವಿನದು. ಇದು ದಾರಿದ್ರ್ಯಸಂಖ್ಯೆ. ಯತಿಗಳನ್ನು ತೋರಿಸುವ ಸಂಖ್ಯೆ. ಈಶ್ವರನನ್ನು ತೋರಿಸುತ್ತದೆ. ತ್ರಯೋದಶೀ ತಿಥಿಯಲ್ಲಿ ಈಶ್ವರನನ್ನು ಪೂಜಿಸುತ್ತಾರೆ. ಆದುದರಿಂದಲೇ ವ್ಯವಹಾರದಲ್ಲಿ '13' ಬಹಳ ಕೆಟ್ಟ ಸಂಖ್ಯೆ ಅಂದರು.

ನು, ಶನಿ. ಈ ಶನಿ ಗುರು ದೆಶೆ ನಕ್ಷತ್ರ ಅಂತೆಯೇ
ಶಾ ನಕ್ಷತ್ರ, ಈ ಕಾರಣ ರವಿ ಮತ್ತು ಶನಿಗಳ ದೆಶೆಗಳು
ುತ್ತೆ. ಇವರಿಬ್ಬರೂ ಗುರ ದೆಶಾ ನಕ್ಷತ್ರ, ಈ ಕಾರಣ
ನು ಗುರು. ಈ ಗುರುವು ಶುಕ್ರ ದೆಶಾ ನಕ್ಷತ್ರ ಈ ಕಾರಣ
ವನಿರುವ ನಕ್ಷತ್ರ ರಾಹು ದೆಶೆಯದು ಇವನ ನಂತರ

ನು ಶನಿ ದೆಶಾ ನಕ್ಷತ್ರ, ಕುಜನು ರವಿ ದೆಶೆ ನಕ್ಷತ್ರ, ಆದರೆ
ಂದೇ ದೆಶಾ ನಕ್ಷತ್ರ. ಈ ಕಾರಣ ಬುಧನ ದೆಶೆ ಕುಜನ
ಾಗಿ ನಡೆಯುತ್ತವೆ.

ರಾಧಾ ನಕ್ಷತ್ರದಲ್ಲಿ ಕೇಳುವವನಿಗೆ ದೆಶಾ ಕ್ರಮ ಈ ರೀತಿ
ಕುಜ (2) ಶನಿ–ರವಿ (3) ಗುರು (4) ಶುಕ್ರ (5) ರಾಹು
ದ್ರ

ಇಲ್ಲಿ ಬುಧನಿಗೆ ನೀಚರಾಶಿ ಸಂಚಾರ. ಈ ಕಾರಣ ಬಲವಿಲ್ಲ. ಈ ಬಲ ಬರಬೇಕು ಸಂಗಾತಿ ಕುಜನಿಂದ. ಈ ಬುಧ ಕುಜ ಯೋಗ ಗಣಿತಯೋಗ. ವೇದಾಂತದಲ್ಲಿ ಸಾಂಖ್ಯ ತತ್ತ್ವ. ಈ ತತ್ವ ಸಂಖ್ಯೆ ಇಪ್ಪತ್ತನಾಲ್ಕು. ಹಾಗಿಲ್ಲ, ವಿಷ್ಣುವಿನದು ಇಪ್ಪತ್ತನಾಲ್ಕು ಅವತಾರಗಳು. ಇಪ್ಪತ್ತನಾಲ್ಕು ಹೆಸರುಗಳು. ಬುಧನ ದೆಶೆ (24) ಕುಜ (3) ರವಿ ಶನಿ ಯೋಗದ ದೆಶೆ (9) ಅನಂತರ ಗುರು (5) ಮೇಲೆ ಶುಕ್ರ (11) ವರುಷ ಕೊನೆಯದಾಗಿ ರಾಹು (7) ಪುನಃ ಬುಧ. ಇಲ್ಲಿ ಚಂದ್ರನ ದೆಶೆಗೆ ಅವಕಾಶವಿಲ್ಲ.

ಈ ರೀತಿ 24-3-9-5-11-7 ಒಟ್ಟು 59 ವರ್ಷಗಳು. ಪುನಃ ಭುಧನ ದೆಶೆ. ಇಲ್ಲಿ ಎರಡನೆಯಸಲ ಬರುತ್ತೆ. ಇಲ್ಲಿ ಮೊದಲು ನೀಚ ಸಂಚಾರದ ಫಲ. ಆದರೆ ಈಗ ನೀಚಭಂಗ ರಾಜಯೋಗದ ಫಲ. ಮಹಾಯೋಗ ಎಂದರು.

ಗ್ರಹದ ಸಂಖ್ಯೆ ಆ ಗ್ರಹದ ನವಾಂಶದಿಂದ ನಿರ್ಣಯ. ಉದಾಹರಣೆಗೆ ಬುಧ ಶನಿ ನವಾಂಶದಲ್ಲಿ, ಆಗ ಸಂಖ್ಯೆ 8, ಚಂದ್ರ ನವಾಂಶದಲ್ಲಿ 4, ಗುರು ನವಾಂಶದಲ್ಲಿ 2, ಹೀಗೆಯೇ ಶನಿ ಅಂಶದ ಕುಜನಿಗೆ 3 ಶುಕ್ರಾಂಶದ ಕುಜನಿಗೆ 6 ರವಿ ಅಂಶಕ್ಕೂ 6 ಇತ್ಯಾದಿ.

ಇನ್ನೂ ಒಂದು ವಿಚಿತ್ರ. ಇಲ್ಲಿ ಶುಕ್ರನ ದೆಶೆ (11) ವರ್ಷ ಆದರೂ ಶನಿ ಗ್ರಹದ ಪರಿವರ್ತನೆ. ಈ ಶನಿ ಮೃತ್ಯು ಯೋಗದಲ್ಲಿ, ಈ ಕಾರಣ ಅಮರಣಾಂತ ಈ ಶುಕ್ರನದೇ ಯೋಗ ಇದು ಕೆಲವು ಮತಗಳ ನಿರ್ಣಯ.

ಈ ರೀತಿ ಈ ಸಂಖ್ಯಾ ಶಾಸ್ತ್ರದಲ್ಲಿ ಗ್ರಹ, ಅವನು ಇರುವ ನಕ್ಷತ್ರ, ಆ ದೆಶಾ ಗ್ರಹದ ವರ್ಷ. ಈ ರೀತಿ ಪುನಃ ಪುನಃ ಮುಂದೆ ಮುಂದೆ ಹೋಗುತ್ತೆ. ಕೇಳುವ ನಕ್ಷತ್ರದಿಂದ ದೆಶೆ ಪ್ರಾರಂಭ. ಅದೇ ಪೃಚ್ಛಕನ ಹೆಸರು! ಕೆಲವರು ನಾಮಗ್ರಹದಿಂದಲೂ ದೆಶೆ ಪ್ರಾರಂಭ ಮಾಡಿ ಹೇಳುತ್ತಾರೆ. ಒಟ್ಟಿನಲ್ಲಿ ಎರಡೂ ಒಂದೇ! ಜಯ, ಫಲದ ಸಿದ್ಧಿ ಆ ದೇವತಾ ಮಂತ್ರಾನುಷ್ಠಾನದಿಂದ ಪ್ರಾಪ್ತ ಕೃಪೆ.

ಈ ಸಂಖ್ಯೆಗಳಿಗೆ ಮತ್ತೂ ಒಂದು ಕ್ರಮ. ಕೇವಲ ಸಂಖ್ಯೆಗಳಾದ

ಕಾರಣ ಯಾವ ಸಂಖ್ಯೆಗೆ ಆದರೂ ಸರಿ ಆಗುತ್ತೆ. ನಮ್ಮ ರೂಢಿಯಲ್ಲಿ ಈಗ ಆಂಗ್ಲ ವರ್ಷದ ಸಂಖ್ಯೆ. ಆ ಸಂಖ್ಯೆಗೆ ಈ ದೆಶೆಯು ಸಮನ್ವಯ ಆಗುತ್ತದೆ.

ಉದಾಹರಣೆಗೆ ಮೇಲೆ ಹೇಳಿದ ಕುಂಡಲಿ. ಉತ್ತರಾಭಾದ್ರಾ ಎರಡು ಬುಧ–ಪೂರ್ವಾಷಾಢಾ ನಾಲ್ಕು ಗುರು–ಶತಭಿಷಾ ನಾಲ್ಕು ಶುಕ್ರ–ವಿಶಾಖಾ ಒಂದು ಶನಿ–ಪೂರ್ವಾಭಾದ್ರಾ ಮೂರು ರವಿ–ಕೃತ್ತಿಕಾ ಎರಡು ಕುಜ–ಚಿತ್ರಾ ಎರಡು ಚಂದ್ರ–ಆಶ್ಲೇಷಾ ಒಂದು ರಾಹು–ಶ್ರವಣ ಮೂರು ಕೇತು.

ಈಗ 1967ನೇ ಇಸ್ವಿ ನಡೆಯುತ್ತಿದೆ. ಇಲ್ಲಿ ಉತ್ತರಾರ್ಧದ ಸಂಖ್ಯೆ–"67". ಇದಕ್ಕೆ ಕುಜದೆಶೆ. ಈ ಕುಜದೆಶೆ 60ನೇ ಇಸವಿಯಿಂದ 69ರವರೆಗೆ. ಭುಕ್ತಿ ಅಂಕ ಕೊನೆಯದು. 61 (ಕುಜ ಶನಿ) 62 (ಕುಜ–ಬುಧ–ಗುರು) 63 (ಕು–ಕು–ಶ) 64 (ಕುಜ–ಚಂದ್ರ) 65 (ಕುಜ–ಗುರು) 66 (ಕು–ಕು) 67 (ಕುಜ–ರಾಹು) 68 (ಕುಜ–ಬುಧ–ಶನಿ) 69 (ಕುಜ–ರವಿ)..

ಯಾವುದೇ ಜಾತಕ. ಅಲ್ಲಿ ಕುಜನು ಪೂರ್ಣಬಲ ಇಲ್ಲ. ಆಗ ಈ ಹತ್ತು ವರ್ಷಗಳು ಅರಿಷ್ಟ. ಈಗ ಉದಾಹರಣೆಗೆ ಕುಜ ರಾಹು ಯೋಗ. ಈ ಯೋಗ 67ನೆಯ ಇಸ್ವಿಯಲ್ಲಿ ಫಲ.

ಅರಿಷ್ಟಕಾಲ ನಿರ್ಣಯವೂ ಅಷ್ಟೆ. ಕುಜ ಶನಿಯೋಗ. ಈ ಅರಿಷ್ಟ ಮೂರು ವರ್ಷ. ಮಕ್ಕಳಲ್ಲಿ ಆದರೆ ಮೂರನೆಯವನಿಗೆ ಆಪತ್ತಿನ ಯೋಗ. ಮದುವೆಯಲ್ಲಿ ಹೆಣ್ಣಿಗೆ ಮೂರು ಸಲ ಗೊತ್ತಾಗಿ, ಬಿಟ್ಟು, ನಾಲ್ಕನೆಯದು ನಿರ್ಣಯ. ಮೂರು ಜನಗಳು ಸೇರಿ ವ್ಯಾಪಾರ ಮಾಡಿದರೆ ಹಾನಿ. ಕುಜ ಶನಿಯೋಗ ದೇಶಭ್ರಷ್ಟಯೋಗ. ಈಗ ಅದು ಸುಯೋಗ, ವಿದೇಶಯಾತ್ರೆ, ಅದು ಈ ಮೂರು ಸಂಖ್ಯೆಯ ವಯಸ್ಸು, ಇಸ್ವಿ ವರ್ಷ ಬಂದಾಗ ಆದೀತು. ಶುಕ್ರ ಶನಿಯನ್ನು ಬೆರೆತರೆ ಕುಜನಿಗೆ ದೋಷ ಶಮನ. ಮೂರು ವರ್ಷ ಅರಿಷ್ಟ. ಅನಂತರ ಮಹತ್ತರವಾದ ಸುಯೋಗ.

ಈ ಸಂಖ್ಯೆಯ ಪ್ರಯೋಜನ ಈ ರೀತಿ, ಆ ರೀತಿ ಎಂದಿಲ್ಲ.

ವಾಹನಗಳ ರಿಜಿಸ್ಟ್ರೇಷನ್ ಸಂಖ್ಯೆಗೂ ಇದು ಸರಿ ಆಗುತ್ತೆ. ರಾಹು ಕುಜ ಯೋಗವಿದೆ. ಯಾವುದೇ ವಾಹನ ಕೊಳ್ಳಲಿ, ಒಂದು '7' ಇದ್ದೇ ಇರುತ್ತದೆ. ಕುಜರಾಹುವಿನ 67 ಅಥವಾ 76 ಇರುವ ವಾಹನ ಒಂದಲ್ಲ ಒಂದು ದಿನ ಅಪಘಾತ ಎದುರಿಸಲೇ ಬೇಕು. ಆದರೆ ಕೊನೆಯ ಅಂಕಿಗೆ ಬಲ ಕಡಿಮೆ. ದಶಕಕ್ಕೆ ಬಲ ಹೆಚ್ಚು. ಹೀಗೆ ಹಿಂದೆ ಹಿಂದೆ ಹೋದಂತೆ ಬಲವೂ ಹೆಚ್ಚು ಹೆಚ್ಚು. '7' ಇದರ ದೋಷ '70' ಆದಾಗ ಹೋಗುತ್ತೆ. '700' ಇದು ಸುಯೋಗ. '7000' ಎಲ್ಲದಕ್ಕೂ ಹೆಚ್ಚು. ಏಳು ಲಕ್ಷ ಇನ್ನೂ ಬಲ. ಈ ಸಂಖ್ಯೆ ಗ್ರಹ ದೋಷಕ್ಕಾಗಿ ಮಾಡುವ ಜಪಕ್ಕಾಗಿ ಉಪಯೋಗ. ಇದೇ ಕಾರಣ ದುರ್ಗಾ ಸಪ್ತಶತೀ ಎಂದರು. ಏಳುನೂರು ಶ್ಲೋಕ ಇದೆ ಎಂದರ್ಥ.

ಹಿಂದೂಗಳ ಸಂಖ್ಯಾಶಾಸ್ತ್ರ ಬಹುವಿಚಿತ್ರ. ವಿದೇಶೀಯರ ಶಾಸ್ತ್ರಗಳಂತೆ ಕೇವಲ ಒಂಭತ್ತು ಅಂಕಗಳಿಗೆ ಸೀಮಿತವಲ್ಲ. ಪುರಾಣಗಳಲ್ಲಿ ಇದರ ಉಪಯೋಗ ಹೆಚ್ಚು. ಇನ್ನೂ ಹಲವರು ವಾಲ್ಮೀಕಿ ರಾಮಾಯಣವನ್ನೇ ಬಳಸಿ ಪ್ರಶ್ನೆಗಳನ್ನು ಹೇಳುವವರೂ ಇದಾರೆ.

ಈ ರೀತಿ ಚಂದ್ರನಿಗೆ ಒಂದು ಶಾಸ್ತ್ರ. ಕುಜನಿಗೆ ಒಂದು ಶಾಸ್ತ್ರ, ಬುಧನಿಗೆ ಒಂದು, ಹೀಗೆ. ಇದರಲ್ಲಿ ಬುಧನದು ಸಂಖ್ಯಾಶಾಸ್ತ್ರ.

# 17

## ದೇವತೆಗಳ ಪುರೋಹಿತ–ಗುರು

ದೇವೇಂದ್ರನೇ ಮೊದಲಾಗಿ ದೇವತೆಗಳು. ಇವರಿಗೆ ಶತ್ರುಗಳೇ ರಾಕ್ಷಸರು. ಆದರೆ, ಒಂದೇ ತಂದೆಗೆ ಹುಟ್ಟಿದವರು. ಕಶ್ಯಪನಿಗೆ ಅದಿತಿಯಲ್ಲಿ ದೇವತೆಗಳು, ದಿತಿಯಲ್ಲಿ ರಾಕ್ಷಸರು, ಅಥವಾ ದೈತ್ಯರು. ಇವರಿಬ್ಬರೂ ಬದ್ಧದ್ವೇಷಿಗಳು.

ದೈತ್ಯರು ತಪಸ್ಸು ಮಾಡಿದಂತೆ ದೇವತೆಗಳು ಮಾಡಲಾರರು. ಬ್ರಹ್ಮನನ್ನು ಕುರಿತು ಅವರು ತಪಸ್ಸು. ಇವರಿಗೆ ಶಕ್ತಿ ಸಾಮರ್ಥ್ಯಗಳು ಹೆಚ್ಚು. ಅಸದಳ ತಪೋಶಕ್ತಿ ಬೇರೆ. ಆದರಿಂದ ಪಡೆದ ಬ್ರಹ್ಮವರಗಳು.

ದೇವತೆಗಳಿಗೆ ಈ ಕೆಲಸಗಳು ಕಠಿಣ. ಕರ್ತವ್ಯ ನಿಷ್ಠೆ ಗುರುಭಕ್ತಿ, ರಾಕ್ಷಸರಲ್ಲಿದ್ದಂತೆ ದೇವತೆಗಳಲ್ಲಿರಲಾರದು. ದೇವೇಂದ್ರನು ಬ್ರಹ್ಮಶಾಪಗಳ ಗಣಿ. ಋಷಿಗಳ ತಪಸ್ಸನ್ನು ಕೆಡಿಸುವುದು ಅವನಿಗೆ ಒಂದು ಕೆಲಸ. ಯಜ್ಞಪಶುಗಳನ್ನು ಅಪಹಾರ ಮಾಡುವುದು, ಋಷಿಗಳ ಹೆಂಡತಿಯರನ್ನು ಕೆಡಿಸುವುದು, ಈ ರೀತಿ ಕೆಲಸಗಳು. ಬ್ರಹ್ಮಶಾಪ. ಅವನಿಗೆ ಅದರಿಂದ ಬಂದ ಬಳುವಳಿ.

ಬ್ರಹ್ಮಶಾಪದಿಂದ ಇವನ ಬಲ ಕುಗ್ಗುತ್ತೆ. ಆಗಲೇ ರಾಕ್ಷಸರು ದೇವತೆಗಳ ಮೇಲೆ ಬೀಳುತ್ತಾರೆ. ಆಗ ನಿರಂತರ ಕಷ್ಟ! ಇದಕ್ಕೆ ಪರಿಹಾರ? ಇಷ್ಟುಪಾಪಗಳು

ಇದ್ದರೂ ಶ್ರೀಹರಿಯ ಅನುಗ್ರಹ ಅವನಿಗೆ ಮಾಡಿಸಬೇಕು! ಆ ಕೆಲಸ ಈ ಗುರುವಿನದು. ಇವನು ಅಂಗೀಸ ಮಹರ್ಷಿಯ ಮಗ. "ಆಂಗೀರಸ" ಎಂದು ಹೇಸರು. ಇವನು ದೇವತೆಗಳಿಗೆ ಪುರೋಹಿತನು, ದೇವತೆಗಳ ಅಂತರ್ಯ ತಿಳಿದವನು. ಸರ್ವದಾ ಅವರಿಗೆ ಅನುಕೂಲನು. ಆದ್ದರಿಂದ ಇವನನ್ನು 'ದೇವತೆಗಳ ಮಂತ್ರಿ' 'ಸುರಮಂತ್ರಿ' ಅಂದರು.

ಭೂಲೋಕದಲ್ಲಿ ಜನಗಳು ಪಾಪನಿರತರಾಗಿ ನಿರಂತರ ಪೀಡೆಗಳನ್ನು ಅನುಭವಿಸಿದರೆ, ದೇವತೆಗಳ ಬಲಕುಗ್ಗುವುದುದು, ರಾಕ್ಷಸರ ಬಲ ಹೆಚ್ಚುವುದು. ಆಗ ದೇವತೆಗಳು ಸೋಲುವರು ಆಗ ಅದಕ್ಕೆ ಸರಿಯಾದ ಶಾಂತಿಯನ್ನು ಮಾಡಿಸಿ ದೇವತೆಗಳ ಜಯ ಸಂಪಾದಿಸಿಕೊಡಬೇಕಾದ ಹೊಣೆ ಇವನದು. ದೇವತೆಗಳು ಎಂದರೆ ಶುಭ ಕೆಲಸ ಮಾಡುವವರು.

ಜಗತ್ತಿಗೆ ಮಳೆ, ಬೆಳೆ, ಗಾಳಿ, ಬೆಳಕು, ಇತ್ಯಾದಿಗಳನ್ನು ಕೆಟ್ಟು ಜಗತ್ತಿಗೆ ಒಳ್ಳೆಯದನ್ನು ಮಾಡುವುದೇ ದೇವತೆಗಳ ಕೆಲಸ. ಇದ್ಕೆ ಅಡ್ಡವಾಗಿ ವೈರಿಗಳಾದ ರಾಕ್ಷಸರು. ದೇವತೆಗಳು ಜಗತ್ತಿಗೆ ಶುಭವನ್ನು ಕೋರುವರು. ವಿರುದ್ಧ ನೀತಿ ರಾಕ್ಷಸರದು.

ಶುಭಕೋರುವ ದೇವತೆಗಳಿಗೆ ಗುರುವು. ಆದಕಾರಣ ಇವನು ಅತ್ಯಂತ ಶುಭನು ಮತ್ತು ಪುಣ್ಯಶಾಲಿ. ದೋಷಗಳನ್ನು ಶೇಷವಿಲ್ಲದೆ ತೊಳೆದು ಶುಭವರ್ಧನೆ ಮಾಡುವವರಲ್ಲಿ ಇವನು ಅತ್ಯಂತ ಬಲಿಷ್ಠನು.

ಈ ಕಾರಣ 'ಗುರು' ಎಂದು ಎಲ್ಲರೂ ಪೂಜಿಸುವರು. ಲಘು ಅಂದರೆ ಹಗುರ. ಗುರು ಅಂದರೆ ಭಾರ. ಲಘು ಅಂದರೆ ಚಿಕ್ಕದು, 'ಗುರು' ಅಂದರೆ ದೊಡ್ಡದು.

ಎಲ್ಲರಿಗೂ ದೊಡ್ಡವನು, ಪೂಜೆಗೆ ಸರಿಯಾದವನು. ಅದಕ್ಕೇ ಇವನನ್ನು 'ಗುರು' ಅಂದರು.

## ಗುರುವಿಗೆ ವಿಚಿತ್ರದ ಬಲ

ಈ ಗುರುವು ಮಹಾಬಲಿಷ್ಠ! ಈ ಬಲ, ಈ ಶಕ್ತಿಗಾಗಿ ಇವನದು

ಸದಾ ತಪಸ್ಸು. ಇದೇ ಇವನ ಬಲ. ಕಾಡಿನಲ್ಲಿ ಋಷಿಗಳು ತಪಸ್ಸು ಮಾಡಲಿ, ಆ ತಪೋಬಲವೂ ಈ ಗುರುವನ್ನೇ ಸೇರಿ ಅವನ ಬಲ ಅಷ್ಟಿಷ್ಟಲ್ಲ!

ಇವನ ಬಲ ಬಹಳ ವಿಚಿತ್ರ, ಶಿಷ್ಯರಿಲ್ಲದಿದ್ದರೆ ಬಲವಿಲ್ಲ! ಶಿಷ್ಯರು ಎಷ್ಟು ಜನ ಜಾಸ್ತಿ ಇದ್ದರೆ ಅಷ್ಟೂ ಬಲ. ಆಕಾಶ ಎಲ್ಲದಕ್ಕೂ ಆಶ್ರಯ. ಹಾಗೆ ಗುರುವಿನಲ್ಲಿ ಎಲ್ಲರಿಗೂ ಆಶ್ರಯ. ಜನ ಸೇರಿದರು. ಅವನ ಬಲ ಎಲ್ಲಾ ಅವರಿಗೆ ಕೊಟ್ಟಾಯಿತು. ಕೊಟ್ಟಷ್ಟೂ ಅವನಿಗೆ ಬಲ ಹೆಚ್ಚು ಹೆಚ್ಚು. ಇದೇ ವಿಚಿತ್ರ! ಬಿಡಿಸಿದಷ್ಟೂ ತುಳಸಿದಳ ಹರಡುವುದು ಹೆಚ್ಚು! ಹಾಗೆಯೇ ವಿದ್ಯೆ! ಪ್ರಚಾರ ಹೆಚ್ಚು. ಬಲವೂ ಹೆಚ್ಚು. ಗುರುವು ವಿದ್ಯೆಗೆ ಕಾರಕನು, ವಿದ್ಯಾದಾತನು. ದಿವ್ಯವಾದ ಖಚಿತ ಜ್ಞಾನಿ.

ಕತ್ತಲು, ಸಂದೇಹ ಇವನಿಗೆ ಇಲ್ಲ! ಖಚಿತ ಇವನ ಜ್ಞಾನ. 'ಗ' ಎಂದರೆ ಕತ್ತಲು 'ರ' ಎಂದರೆ ಬೆಳಕು, ಬೆಂಕಿ.'ಜ್ಞಾನಂ ಪರಂಜ್ಯೋತಿ' ಅಂದರು. 'ಯಥಾರ್ಥ್ಯಂ ಜ್ಞಾನಂ' ಅಂದರು. ನಿಜಸ್ವರೂಪವನ್ನು ತಿಳಿಸುವುದೇ 'ಜ್ಞಾನ' ಅಂದರು. ಈ ಜ್ಞಾನವು ಅಚ್ಚಳಿಯದ ನಿಜ. ಇವುಗಳನ್ನು 'ಅಮ್ನಾಯಿ' ಅಂದರು. ವೇದ ಪುರಾಣ ರಾಮಾಯಣಗಳೇ ಆದಿಯಾಗಿ ಈ ಅಮ್ನಾಯಗಳು ದೇವತೆಗಳ ವಿಶಿಷ್ಟ ವಿಚಾರ, ಅಂತರ್ಯಗಳನ್ನು ಬಲ್ಲವನು ಈ ಗುರು. ಸರ್ವಜ್ಞನು, ಶ್ರೀ ಹರಿಸ್ವರೂಪನು.

## ಗುರು ಆಕಾಶ ತತ್ವ

'ನಮಃ ಸಮಸ್ತ ಭೂತಾನಾಂ ಆದಿ ಭೂತಾಯ ಭೂಭೃತೇ' ಅಂದರು. ಆಕಾಶ, ವಾಯು, ಅಗ್ನಿ, ಅಪ, ಪೃಥ್ವಿ– ಇದರಲ್ಲಿ ಆದಿಭೂತ ಆಕಾಶವು. ಆಕಾಶದಲ್ಲಿ ಇತರ ತತ್ವಗಳು ಅಡಗಿವೆ. ಅಂತೆಯೇ ಶ್ರೀಹರಿಯಲ್ಲಿ ಎಲ್ಲಾ ಲೋಕಗಳು ಅಡಗಿವೆ.

'ಆಕಾಶಂ ಶಬ್ದ ತನ್ಮಾತ್ರಂ' ಎಂದರು. ಈ ಆಕಾಶವೂ ಪರಮಾತ್ಮನು ವೀರ್ಯದಿಂದಾದ ಶಬ್ದವು. 'ಅರ್ಥಶ್ರಯತ್ವಂ ಶಬ್ದಸ್ಯ' ಈ ಶಬ್ದದಲ್ಲಿ ಅರ್ಥ್

ಅಡಗಿತು. ಪದಾರ್ಥಗಳಿಗೆ ಆಕಾಶವೇ ಆಶ್ರಯ ಎಂದೂ ಆದೀತು. ಹಾಗಿಲ್ಲ, ಆಕಾಶ ಲೋಕದಳಿಗೆ ಆಶ್ರಯ. ಅಂತೆಯೇ ಅರ್ಥವು ಶಬ್ದದಲ್ಲಿ ಆಶ್ರಯ ಕಂಡಿತು. ಈ ಶಬ್ದವು ಪರಮಾತ್ಮನ ಕಿವಿಗಳು. 'ನಭಃ ಶ್ರೋತ್ರತು ಶಬ್ದಗಂ' ಅಂದರು. ಆದುದರಿಂದ ಈ ಗುರುವು ಶಬ್ದಕಾರಕನು. ಕಿವಿಗಳಿಗೆ ಕಾರಕನು. ಶಬ್ದ ಉತ್ಪತ್ತಿ ಮಾಡುವ ಗಂಟಲಿಗೆ ಕಾರಕನು.

'ನಭೋಲಿಂಗಂಚ ಈಶ್ವರಂ' ಎಂದರು. ಪರಮಾತ್ಮನು ಆಕಾಶ. ಆಕಾಶ ಅವನ ಸ್ವರೂಪ. ಪರಮಾತ್ಮನ ಗುಣಗಳು ಈ ತತ್ವದಲ್ಲಿ. ತತ್ವ–ಗ್ರಹವಾದ ಗುರುವಿನಲ್ಲಿ ಕಾಣುತ್ತೆ. ಪರಮಾತ್ಮನು ಅಡಗಿರುವುದು ಜೀವನದಲ್ಲಿ. ಸಮಸ್ತ ಜೀವಗಳಿಗೂ ಈ ಗುರುವೇ ಕಾರಕ. ಆದಕ್ಕೆ ಅವನನ್ನು 'ಜೀವ' ಅಂದರು.

ಜೀವನು ಜೀವರಾಶಿಗಳಿಗೆಲ್ಲಾ ಅಧಿಪತಿ. ಪರಮಾತ್ಮನ ಸಂಗದಿಂದ ಅವನ ಗುಣಗಳನ್ನು ಹೊಂದಿದವನು. ಅತ್ಮನು ಇವನಲ್ಲಿ ಅಡಗಿದ್ದಾನೆ. 'ಆತ್ಮಾ ವೈ ಪುತ್ರ ನಾಮಾಸಿ' ಆತ್ಮನೇ ಪುತ್ರ ಸ್ವರೂಪನು ಎಂದರು. ಆದುದರಿಂದಲೇ ಈ ಗುರುವು ಪುತ್ರಕಾರಕನಾದನು.

## ಕರ್ಮಕಾರಕ ಗುರು

ಜೀವನು ತ್ರಿಗುಣಗಳಿಗೆ ಬದ್ಧನು. ಪರಮಾತ್ಮನು ನಿರ್ಗುಣನು. ಸತ್ವ, ರಜ, ತಮ ಮೂರು ಗುಣಗಳು. 'ಕುರ್ವತೇ ಅವಶಂ ಕರ್ಮ ಗುಣ್ಯೈ ಸ್ವಾಭಾವಿಕೈರ್ಬಲಾತ್' ಎಂದರು. ಈ ಗುಣಗಳಿಂದ ಜೀವನು ಕರ್ಮ ಮಾಡುತ್ತಾನೆ. ಇದು ಅವನ ಸಹಜ ಶೀಲ.

ಈ ರೀತಿ ಮಾಡುವ ಕೆಲಸವೇ 'ಕರ್ಮ'. ಪ್ರತಿಯೊಂದು ಕರ್ಮಕ್ಕೂ ಫಲವಿದೆ. ಈ ಕರ್ಮ ಮತ್ತು ಅದರ ಫಲ ಇವುಗಳನ್ನು ವಿವರಿಸುವ ಶಾಸ್ತ್ರಕ್ಕೆ 'ಕರ್ಮಕಾಂಡ' ಎಂದು ಕರೆದರು. ಜ್ಯೋತಿಷ್ಯ ಶಾಸ್ತ್ರದಲ್ಲಿ ಈ ಕರ್ಮಕಾಂಡವೇ ಮುಖ್ಯ.

ಈ ಗುರುವು ಕರ್ಮಕ್ಕೂ ಅದಕ್ಕೆ ಕಾರಣವಾದ ಈ ಮೂರು ಗುಣಗಳಿಗೂ ಕಾರಕನಾದನು. ಈ ಕರ್ಮ ಶಾಸ್ತ್ರವಾದ ಕರ್ಮಕಾಂಡಕ್ಕೂ ಕಾರಣನು.

## ವಿದ್ಯಾ–ಅವಿದ್ಯಾ

ವೇದಾಂತದಲ್ಲಿ ವಿದ್ಯಾ ಅವಿದ್ಯಾ ಎಂದರು. ಎತ್ತರದ ಗುಡ್ಡದ ಮೇಲೆ ಒಬ್ಬರು, ಕೆಳಗಡೆ ಒಬ್ಬರು ನಿಂತರೆ ಪರಸ್ಪರ ಸಣ್ಣಗೆ ಕಾಣುತ್ತಾರೆ. ಇವರಿಗೆ ಅವರ ಅವಿದ್ಯೆ ಕಾಣುತ್ತೆ. ವಿದ್ಯಾ ಅವಿದ್ಯಾ ಎರಡೂ ಪರಸ್ಪರ ಬದಲಾಯಿಸಿಕೊಳ್ಳುವುದು. ಹುಚ್ಚಾಸ್ಪತ್ರೆಯಲ್ಲಿ ಒಳಗಡೆ ಇರುವವರಿಗೆ ಹೊರಗಡೆಯವರು ಹುಚ್ಚರು, ಹೊರಗಿನವರಿಗೆ ಒಳಗಡೆ ಇರುವವರು ಹುಚ್ಚರು. ಜನ್ಮ ತಾಳಿದ ಶಂಕರ, ರಾಮಾನುಜ, ಮಧ್ವರು ಈ ವಿದ್ಯಾ ಅವಿದ್ಯಾ ಗೊಂದಲವನ್ನು ಅವರವರಿಗೆ ತಕ್ಕಂತೆ ಬಗೆಹರಿಸಿಕೊಂಡಿದ್ದಾರೆ. ಈ ವಿದ್ಯಾ ಅವಿದ್ಯೆ ಎರಡಕ್ಕೂ ಗುರುವೇ ಕಾರಕನು.

ಜ್ಞಾನವೇ ಬ್ರಹ್ಮಜ್ಞಾನವು. ಇದನ್ನು ತಿಳಿಸುವ ಸೂತ್ರಗಳೇ ಬ್ರಹ್ಮ ಸೂತ್ರಗಳು. ಇವೆದಕ್ಕೂ ಗುರುವೇ ಕಾರಕನು. ಈ ಜ್ಞಾನ ಶಕ್ತಿ ದೇವತೆಯೇ ಸರಸ್ವತಿ, ಭಾರತೀ, ವೇದಮಾತಾ, ಓಂಕಾರ ಸ್ವರೂಪಿಣೀ ಎಂದರು.

ಜ್ಯೋತಿಷ್ಯ ಶಾಸ್ತ್ರದಲ್ಲಿ ವೇದಾಂತ ಬೇಡ. ಎಲ್ಲರೂ ಮಾಡುವ ಕರ್ಮ ಅದರ ಫಲ, ಇವೆರಡನ್ನು ಹಿಡಿದು ಮುಂದುವರಿಯಿತು.

ವ್ಯವಹಾರದಲ್ಲಿ ಜ್ಞಾನ ಅಂದರೆ ನಿಜಸ್ವರೂಪದ ಅರಿವು. ಈ ಜ್ಞಾನ ಅಥವಾ ತಿಳುವಳಿಕೆಯಿಂದ ವಸ್ತು, ವಿಚಾರಗಳ ಉಪಯೋಗ ಸುಲಭ. ಈ ಉಪಯೋಗವೇ ಕರ್ಮ. ಇದರಿಂದ ಪ್ರಪಂಚಕ್ಕೆ ಅಬಿವೃದ್ಧಿ. ಇದೇ 'ವಿದ್ಯೆ'ಯು. ಈ ಜ್ಞಾನದ ದುರುಪಯೋಗ ಎಲ್ಲರಿಗೂ ಹಾನಿ. ಇದೇ 'ಅವಿದ್ಯಾ' ಎಂದರು.

## ಕರ್ಮಕಾಂಡ

ಕರ್ಮಕಾಂಡದಲ್ಲಿ ಪಾಪ–ಪುಣ್ಯ ಎಂಬ ಎರಡು ಪದಗಳು. ಅದರಲ್ಲಿ

ಪುಣ್ಯವನ್ನು ತೋರಿಸುವ ಗ್ರಹವೇ ಗುರುವು. ಏನು ಮಾಡಿದರೆ ಪುಣ್ಯವು ಸಿಗುತ್ತದೆ? ಪುಣ್ಯಫಲ ಎಂತಹದು ಈ ವಿವರಣೆಗಳನ್ನು ಕೊಡುವವನು ಗುರುವು.

ಪರಮಾತ್ಮನು, ಗುರುವಾಗಿ ಅವತರಿಸಿ ವೇದವ್ಯಾಸನಾದನು. ಈ ವೇದವ್ಯಾಸರು ಪುಣ್ಯಾರ್ಜನೆ ಮಾಡುವ ಸಲುವಾಗಿ ಕರ್ಮಗಳನ್ನು ವಿವರಿಸಿದರು.ಈ ಕರ್ಮಗಳ ಶಾಸ್ತ್ರವೇ ವೇದಗಲು. ಈ ರೀತಿ ಕರ್ಮಗಳನ್ನು ಮಾಡಿ ಪುಣ್ಯವಂತರಾದ ಮಹನೀಯರ ಕಥೆಗಳೇ ಪುರಾಣಗಳು.

'ಪರೋಪಕಾರಂ ಪುಣ್ಯಾಯ ಪಾಪಾಯ ಪರಪೀಡಿನಮ್' ಎಂದು ಒಂದು ಶ್ಲೋಕ ಪಾದದಲ್ಲಿ ವಿವರಿಸಿದರು.

ಪ್ರತಿಯೊಂದು ಜನ್ಮದಲ್ಲಿಯೂ ಹುಟ್ಟಿದವನು ಕರ್ಮ ಮಾಡುತ್ತಾನೆ. ಅದರ ಫಲವನ್ನು ಅನುಭವಿಸುತ್ತಾನೆ. ಇದರ ವಿವರವನ್ನು ಅವನ ಜನ್ಮ ಕಾಲದಲ್ಲಿ ಗ್ರಹಗಳ ಸ್ಥಿತಿಯು ತೋರಿಸುತ್ತದೆ. ಈ ಚಕ್ರವನ್ನು ತೋರಿಸುವ ನಕ್ಷೆಗೆ 'ಜಾತಕ' ಎಂದರು. "ಪದವೀ ಪೂರ್ವ ಪುಣ್ಯಾನಾಂ" ಎಂದರು.

## ಶಾಪದ ಫಲ ಮತ್ತು ಶಾಂತಿ

ಹಿಂದೂ ಸಂಸ್ಕೃತಿಯಲ್ಲಿ ಇನ್ನೊಬ್ಬರಿಗೆ ತೊಂದರೆ ಕೊಡಬಾರದು. ಹಾಗೆ ಮಾಡಿದಲ್ಲಿ ಆ ತೊಂದರೆಯನ್ನು ನಮಗೆ ಇನ್ನೊಬ್ಬರು ಕೊಡಬಹುದು. ಈ ನಂಬಿಕೆ. ಆದ್ದರಿಂದಲೇ ಯಾವಾಗಲೂ ನಾವು ಮತ್ತೊಬ್ಬರಿಗೆ ಒಳ್ಳೆಯದನ್ನೇ ಮಾಡಬೇಕು ಎನ್ನುವುದು. ಪುನಃ ಅವರು ನಮಗೆ ಒಳ್ಳೆಯದನ್ನೇ ಮಾಡುತ್ತಾರೆ.

ನಾವು ಯಾರನ್ನಾದರೂ ಕಾಡಿದರೆ, ಅವರಿಗೆ ನೋವು. ಆಗ ನೋವು ತಡೆಯಲಾರರು. ಶಾಪ ಕೊಡುತ್ತಾರೆ. ಆ ಶಾಪದಿಂದ ನಮಗೆ ಕೇಡು. ಆ ಶಾಪದಿಂದ ಗ್ರಹಗಳು ನಿರ್ಬಲರಾಗಿರುವಾಗ, ಕೆಟ್ಟ ರಾಶಿಗಳಲ್ಲಿ ಓಡಾಡುವಾಗ ಎಲ್ಲರೂ ಹುಟ್ಟುತ್ತಾರೆ.

ಇದಕ್ಕೆ ಪರಿಹಾರವೆಲ್ಲಿ? ಇದನ್ನು ಬಗೆ ಹರಿಸುವುದು ಹೇಗೆ? ಈ ಪರಿಹಾರ ಸೂಚಿಸುವುದೇ 'ಶಾಂತಿ'. ಆಯಾ ಗ್ರಹದ ಅಭಿಮಾನಿ ದೇವತೆಗಳನ್ನೂ

ಕಾರಕ ಬಂಧುಗಳನ್ನು ಆದರಿಸಿ, ಸತ್ಕರಿಸಿ ಅಮರ ಪ್ರೀತಿಯನ್ನು ಹೊಂದುತ್ತಾರೆ. ಈ ಕ್ರಮವನ್ನು ತೋರಿಸುವುದೇ 'ಕರ್ಮಕಾಂಡ'ದ ಉದ್ದೇಶ.

ಜೋತಿಷ್ಯ ಶಾಸ್ತ್ರದಲ್ಲಿ ಕರ್ಮಕಾಂಡವು ಮುಖ್ಯವಾಗಿರುವುದಕ್ಕೆ ಇದೇ ಮಹತ್ಕಾರಣ.

ಈ ಕರ್ಮ ಕಾಂಡದಲ್ಲಿ 'ಪಾಪ' ಎಂದರೇನು? ಅದರಿಂದ ಕೆಟ್ಟ ಫಲಗಳು ಹೇಗೆ ಉತ್ಪತ್ತಿ? ಕೆಟ್ಟ ಸ್ಥಾನದಲ್ಲಿ ಗ್ರಹಗಳು. ಆಗ ಜನಗಳು ಪಾಪ ಮಾಡುತ್ತಾರೆ. ಈ ಪಾಪ ಮತ್ತು ಅದಕ್ಕೆ ತಕ್ಕ ಪ್ರಾಯಶ್ಚಿತ್ತ ಇದನ್ನೂ ಇಲ್ಲಿ ವಿವರಿಸುತ್ತದೆ.

ಯಾವ ಕೆಲಸ ಕೆಟ್ಟದ್ದು? ಯಾವುದು ಒಳ್ಳೆಯದು? ಆ ಕೆಟ್ಟ ಕೆಲಸಗಳಿಗೆ ನರಕದಲ್ಲಿ ಏನು ಶಿಕ್ಷೆ? ಅದರ ನಿವಾರಣೆಗೆ ಉಪಾಯಗಳು. ಯಾವ ದುಷ್ಕರ್ಮಕ್ಕೆ ಯಾವ ದೇವರನ್ನು ಪೂಜಿಸಬೇಕು? ಎಷ್ಟು ದಿವಸ ಪೂಜಿಸಬೇಕು? ಎಲ್ಲವನ್ನು ವಿಶದವಾಗಿ ತಿಳಿಸುತ್ತದೆ.

ಈ ಶಾಸ್ತ್ರದಲ್ಲಿ ' ಕರ್ಮ ' ಅದರ ಫಲ, ಅದರ ಪರಿಹಾರ ಇವೇ ಮುಖ್ಯ ವಿಷಯಗಳು.

ಇದೇ ರೀತಿ ರೋಗಗಳು. ಯಾವ ಕೆಟ್ಟ ಕರ್ಮ ಮಾಡಿದರೆ ಈ ರೋಗ ಬರುತ್ತದೆ ? ಔಷಧದಿಂದ ಹೋಗುವುದೇ ? ಶಾಂತಿಯಿಂದ ಹೋಗುವುದೇ ? ಎಲ್ಲವನ್ನು ತಿಳಿಸುತ್ತದೆ.

ಇದರಿಂದ ಏನೂ ಪ್ರಯೋಜನ ? ನಾವು ಇನ್ನೊಬ್ಬರಿಗೆ ಕೆಟ್ಟದ್ದು ಮಾಡಬಾರದು. ಆದಷ್ಟು ಒಳಿಯದು ಮಾಡಬೇಕು. ಈ ಮನೋಭಾವವನ್ನೂ ಹುಟ್ಟಿಸುತ್ತೆ. ಸನ್ಮಾರ್ಗಕ್ಕೆ ಜನಗಳನ್ನು ಎಳೆಯುತ್ತೆ.

ಇದೇ ಇದರ ಉದ್ದೇಶ. ಎಷ್ಟು ಉದಾತ್ತ ಈ ಕೆಲಸ! ಜಗತ್ತಿಗೆ ಇದರಿಂದ ಎಷ್ಟು ಒಳ್ಳೆಯದು! ವಿಶ್ವಶಾಂತಿಗೆ ಎಷ್ಟು ಸಹಾಯ!

### ಕರ್ಮ ವಿಪಾಕ

ಈ ಕರ್ಮ ನಾನಾ ರೀತಿ. ಕೆಟ್ಟ ಕೆಲಸ ಮಾಡುತ್ತಾನೆ. ಅದನ್ನು

ಮತ್ತೊಬ್ಬ ನೋಡುತ್ತಾನೆ. ಅದನ್ನು ಅವನು ತಪ್ಪಿಸಬೇಕು. ನೋಡಿ ಕೊಂಡು ಸುಮ್ಮನಿದ್ದರೆ? ಆ ಪಾಪದಲ್ಲಿ ಅವನೂ ಭಾಗಿ, ಅವನಿಗೂ ಶಿಕ್ಷೆ. ನೋಡುವುದು, ಕೇಳುವುದು, ಮಾಡುವುದು ಈ ರೀತಿಯಾಗಿ ಕರ್ಮ ಪ್ರಾಪ್ತಿ. ' ಮಾಡಿದವರ ಪಾಪ ಆಡಿದವರ ಬಾಯಲ್ಲಿ ' ಎಂದು ಹೇಳುತ್ತಾರೆ.

ಅದೇ ರೀತಿಯಾಗಿ ಶುಭ ಕೆಲಸಗಳು. ನೋಡುವುದು, ಕೇಳುವುದು, ಇವುಗಳಿಂದ ಶುಭವೇ ಉಂಟಾಗುತ್ತದೆ. ಅವರ ಪುಣ್ಯದಲ್ಲಿ ಇವನೂ ಭಾಗಿ. ಈ ಕಾರಣ ಉತ್ಸವ, ಸೇವೆ, ಮದುವೆ, ಮುಂಜಿ ಇತ್ಯಾದಿ ಶುಭ ಕಾರ್ಯಗಳಲ್ಲಿ ಎಲ್ಲರನ್ನೂ ಕರೆಯುತ್ತಾರೆ.

ಈ ಶುಭ–ಅಶುಭ ಕರ್ಮಗಳೆರಡಕ್ಕೂ ಈ ಗುರುವೇ ಕಾರಣನು. ಕರ್ಮಕಾಂಡದಲ್ಲಿ ಈ ಗುರುವಿನಿಂದಲೇ ಫಲಗಳು. ಇದಕ್ಕೆ ಕರ್ಮ ವಿಪಾಕ ಸಂಹಿತೆ ಎಂದರು. ಈ 'ಕರ್ಮ ವಿಪಾಕ ಸಂಹಿತೆ' ಯು ೧೨೦೦೦ ಶ್ಲೋಕಗಳಲ್ಲಿದೆ ಈ ಗ್ರಂಥವನ್ನು ಭಟ್ಟನಾರಯಣನು ರಚಿಸಿದನು. 'ಭಟ್ಟನಾರಾಯಣೀಯ' ಈಗ ಸಿಗುವುದು ಸ್ವಲ್ಪ ಜನಗಳಲ್ಲಿ ಮಾತ್ರ.

## ನ್ಯಾಯಮೂರ್ತಿ ಗುರು

ಕೆಟ್ಟ ಕರ್ಮ, ಶುಭ ಕರ್ಮ, ಇದರ ಫಲಗಳು. ಕೆಟ್ಟ ಕರ್ಮಕ್ಕೆ ತಕ್ಕ ಶಾಸ್ತಿ. ನ್ಯಾಯ ಅನ್ಯಾಯ ಅಂದರು. ಇದರ ನಿರ್ಣಾಯಕ್ಕೆ ಸರಕಾರದವರು ಶಾಸನಗಳನ್ನು ಮಾಡಿದರು. ಇದರ ವಿಧೇಯಕಗಳಿಗೆ ಅನುಗುಣವಾಗಿ ವಾದಿಗಳು ತರ್ಕ ಮಾಡಿದರು. ಅಪರಾಧಿ ನಿರಾಪರಾಧಿ ಎಂದು ವಾದ ಮಾಡಿದರು. ಅಧಿಕಾರ ತೀರ್ಪು ಕೊಡತ್ತಾನೆ. ಇವನು ನ್ಯಾಯಮೂರ್ತಿ, ವಾದ ಮಾಡುವವರು ಲಾಯರುಗಳು. ಇದು ನಡೆಯುವ ಜಾಗಕ್ಕೆ 'ನ್ಯಾಯಾಸ್ಥಾನ' ಅಂದರು.

ಈ 'ನ್ಯಾಯಾಸ್ಥಾನ' 'ನ್ಯಾಯಮೂರ್ತಿ' ವಾದಿಗಳು, ಲಾಯರುಗಳು ಶಾಸಕ ವಿಧೇಯಕಗಳಿಗೆ ಈ ಗುರುವೇ ಕಾರಣಕಾರಕನು.

ಅಂತೆಯೇ ಶಾಂತೀ ಆಚರಣೆ. ಇದಕ್ಕೆ ಪುರೋಹಿತರು. ಅವರೇ

ಗುರುಗಳು. ಈ ಬ್ರಾಹ್ಮಣರು ಪುರೋಹಿತರು ಗುರುಗಳು ಎಲ್ಲರಿಗೂ ಈ ಗುರುವೇ ಕಾರಕನಾದನು. ಪೂಜೆಮಾಡಲ್ಪಡುವ ದೇವರಿಗೂ ಈ ಗುರುವೇ ಕಾರಕನಾದನು. ಇದರ ಅಂತರ್ಯ ವಿವೇಕ ಬಲ್ಲವನು ಗುರುವಾದನು. ಈ 'ವಿವೇಕ'ಕ್ಕೂ ಗುರು ಕಾರಕನಾದನು.

ವಾದ ಮಾಡಲು ಬೇಕಾದ ವಿವೇಕ, ವಾಕ್ ಚಾತುರ್ಯ ಇವುಗಳಿಗೂ ಗುರುವೇ ಕಾರಕ ಆದ್ದರಿಂದ ಇವನನ್ನು 'ವಾಚಸ್ಪತಿ' ಅಂದರು.

ಸರ್ವರಲ್ಲಿ ಉತ್ತಮನೇ ಗುರು. ಗುರುವು ದೇವರು. ಉತ್ತಮನು. ಉತ್ತಮವಾದ ಮನುಷ್ಯ, ಪದಾರ್ಥ, ಕಾರ್ಯ ಎಲ್ಲದಕ್ಕೂ ಇವನೇ ಕಾರಕನಾದನು. ಉತ್ತಮ ಲೋಹವಾದ ಚಿನ್ನಕ್ಕೂ ಇವನೇ ಕಾರಕನಾದನು. ಅದರ ವ್ಯಾಪಾರ ಮತ್ತು ವ್ಯಾಪಾರಿಗಳಿಗೂ ಇವನೇ ಕಾರಕನು.

ಗುರುವಿನ ಭಾವಕ್ಕೆ 'ಗೌರವ' ಅಂದರು. ಮಾನ ಮರ್ಯಾದೆ ಅಂದರು. ಇವಕ್ಕೂ ಈ ಗುರುವೇ ಕಾರಕನು. ಇದನ್ನು ಕೊಡುವ ಸಮಸ್ತ ವಿಚಾರ, ಕಾರ್ಯಗಳಿಗೂ ಇವನೇ ಕಾರಕನು ಗುರು ಒಬ್ಬನು ಒಲಿದರೆ ಯಾವ ಕಷ್ಟವೂ ಬಾರದು.

"ಕಿಂ ಕುರ್ವಂತಿ ಗ್ರಹಾಸ್ಸರ್ವೇ ಯಸ್ಯ ಕೇಂದ್ರೇ ಬ್ರಹಸ್ಪತಿಃ" ಅಂದರು.

ಈ ಗುರು ದೋಷ ಪರಿಹರಿಸಿ ಸದ್ಗುರುವನ್ನು ದೊರಕಿಸಿ ಕೊಡುವವನೇ ಶ್ರೀ ಕೃಷ್ಣನು. ಸಮಸ್ತ ಗುರುಗಳೂ ಶ್ರೀ ಕೃಷ್ಣನನ್ನು ಪೂಜಿಸಿದರು. 'ಶ್ರೀಕೃಷ್ಣಾರ್ಪಣ' ಎಂದು ಎಲ್ಲಾ ಕರ್ಮಗಳನ್ನೂ ಅವನಿಗೇ ಒಪ್ಪಿಸಿದರು.

## ಧನಕಾರಕ

ಯಾವ ಕಾಲಕ್ಕೂ ಕೆಡದ್ದು ಚಿನ್ನ. ಎಲ್ಲಾ ದೇಶಗಳಲ್ಲಿ ಅದಕ್ಕೆ ಬೆಲೆ. ಆ ಕಾರಣ ಅದನ್ನು ಚಲಾವಣಾ ನಾಣ್ಯವನ್ನಾಗಿ ಮಾಡಿದರು. ಇದನ್ನು ಸರ್ವರ

ಅಂದರು ಬರ ಬರುತ್ತಾ ಕಾಲ ಸೂಕ್ಷ್ಮ ಆಯಿತು. ಬೆಳ್ಳಿ ರೂಪಾಯಿ ಹೋಗಿ ಈಗ ಬರಿಯ ಕಾಗದ. ಅದರ ಮೇಲೆ 'ರೂಪಾಯಿ' ಅಂತ ಬರೆದಿರುತ್ತೆ. ತೊಗಲಖ್ ಸಾಹೇಬ ಚರ್ಮವನ್ನಾದರೂ ಮಾಡಿದ್ದ. ಈಗ ಅದಕ್ಕಿಂತ ಕಡೆ ಈ ಕಾಗದ. ಚಿನ್ನ ಎಲ್ಲಿ ? ಕಾಗದ ಎಲ್ಲಿ ?

ಯಾವುದೋ ಒಂದು. ಸಂಕೇತಕ್ಕೆ, ವ್ಯವಹಾರಕ್ಕೆ ಇದ್ದರೆ ಸರಿ. ಈ ಸ್ಥಿತಿ! ಇದರಲ್ಲಿ ವ್ಯಾಪಾರ ಮಾಡುವುದು 'ಲೇವಾದೇವಿ', ಈ ಲೇವಾದೇವಿ ಮಾಡುವವರು ಧನಿಕರು. ಈಗೀಗ ಎಲ್ಲರೂ ಮಾಡುತ್ತಿದ್ದಾರೆ! ಬೃಹತ್ ಪ್ರಮಾಣದಲ್ಲಿ ಒಂದು ಮಂಡಲಿಯ ಮೂಲಕ ಈ ವ್ಯಾಪಾರ ನಡೆದೀತು. ಇದಕ್ಕೆ ಬ್ಯಾಂಕ್ ಅಂದರು.

ಈ ಬ್ಯಾಂಕು, ಬ್ಯಾಂಕಿಂಗ್, ಅಲ್ಲಿ ಕೆಲಸ ಮಾಡುವ ವಿಶಿಷ್ಟ ಸಿಬ್ಬಂದಿ ಎಲ್ಲರಿಗೂ ಈ ಗುರು ಕಾರಕ.

ಸರ್ಕಾರದ ಹಣ ಕಾಸು ವ್ಯವಹಾರಗಳು. ಇದನ್ನು ನೋಡಿಕೊಳ್ಳುವ ಮಂತ್ರಿ 'ಕುಬೇರ'ನಿಗೂ ಈ ಗುರುವೇ ಕಾರಕನು. ಖಜಾನೆಗೂ ಈ ಗುರುವೇ ಕಾರಕನು. ಸರಕಾರ ಮಾಡುನ ಸಾಲಪತ್ರಗಳಿಗೂ ಈ ಗುರುವೇ ಅಧಿಪತಿ.

## ವಿದ್ಯಾಕಾರಕ

ಗುರುವು ವಿದ್ಯೆ ಕೊಟ್ಟವನು, ಉಪಾಧ್ಯಾಯನು, ಮಂತ್ರದಾತನು ಗುರುವು ಬಲವಾದ ರಾಶಿಯಲ್ಲಿ, ಆಗ ಉತ್ತಮ ದರ್ಜೆಯಲ್ಲಿ ವಿದ್ಯೆಯ ಲಾಭ. ಆಗ ಆಚಾರ ವಿಚಾರಗಳೂ ಸಮವಿರುವುದು. ಆದುದರಿಂದ ಯಾವ ಮನೆಯಲ್ಲಿ ಆಚಾರ ಸರಿ, ಅಲ್ಲಿ ಓದುವ ಹುಡುಗರಿಗೆ ತಾನಾಗಿಯೇ ವಿದ್ಯೆ ಬರುವುದು.

ಜನ್ಮ ಜಾತಕದಲ್ಲಿ ಗುರುವು ಎಷ್ಟೇ ಕೆಟ್ಟ ರಾಶಿಯಲ್ಲಿರಲಿ, ಮನೆಯಲ್ಲಿ ದೇವರನ್ನು ಪೂಜಿಸುತ್ತಿದ್ದರೆ ಉತ್ತಮವೇಕೆ, ಅತ್ಯುತ್ತಮ ವಿದ್ಯೆಯು ಹತ್ತುವುದು. ಜನ್ಮ ಜಾತಕದಲ್ಲಿ ಗುರುವು ಉಚ್ಚ ರಾಶಿಯಲ್ಲಿರಬಹುದು. ಆದರೆ ಮನೆಯಲ್ಲಿ ದೇವರನನ್ನು ಅನಾದಾರಣೆ ಮಾಡುತ್ತಾರೆ. ವಿದ್ಯಯು ಹತ್ತುವುದಿಲ್ಲ. ಈಗ ಬಲಿಷ್ಠನಾದ ಗುರುವಿದ್ದರೂ ವ್ಯರ್ಥ.

## ಗುರುದರ್ಶನ ಕಾಲ

ಗುರುವು ಯಾವ ರಾಶಿಯಲ್ಲಿರುತ್ತಾನೆ. ಆರಾಶಿ ಮೇಷಾದಿ ಎಷ್ಟನೇ ರಾಶಿ? ಅಷ್ಟು ದಸಕಗಳ ನಯಸ್ಸಿನಲ್ಲಿ. ಗುರುದರ್ಶನ. ಆಗಲೇ ವಿದ್ಯಾ ಲಾಭ, ಗೌರವ.

ಗುರುವಿನ ಜೊತೆ ಯಾವ ಗ್ರಹವಿದ್ದರೆ ಆ ವಿದ್ಯೆಯು ಇವನಿಗೆ ಲಭಿಸುತ್ತೆ. (1) ಶನಿಯಿಂದ ವೈದ್ಯ, ವಿಮಾ ವಿದ್ಯೆ, ವೇದಾಂತ (2) ರವಿಯಿಂದ ರಾಜ ವಿದ್ಯೆ, (3) ಚಂದ್ರನಿಂದ ನಾನಾ ವಿದ್ಯೆಗಳು (4) ಕುಜನಿಂದ ಯಂತ್ರ,ತಂತ್ರ ಉದ್ಯಮ, ಕೈಗಾರಿಕೆ, ವಾದ ವಿದ್ಯೆ. (5) ಬುಧನಿಂದ ವೇದ ಮಂತ್ರ ತಂತ್ರ ವಿದ್ಯೆ, ಲಿಪಿ ವಿದ್ಯೆ, ಜ್ಯೋತಿಷ್ಯ ಕಲಾ–ಕೌಶಲ (6) ಶುಕ್ರನಿಂದ ಕಾವ್ಯ–ಅಲಂಕಾರ–ಸಂಗೀತ (7) ರಾಹುವಿನಿಂದ ವಿಚಿತ್ರ ವಿದ್ಯೆಗಳು. (8) ಕೇತುವಿನಿಂದ ಮೋಕ್ಷ ವಿದ್ಯೆ. ವಿದ್ಯೆ ಹೇಳುವ ಉಪಾದ್ಯಾಯ, ಹೇಳಿಕೊಡುವ ಸ್ಥಳ, ವಿದ್ಯಾಲಯ ಸ್ಕೂಲು, ವಿದ್ಯಾ ಶಾಸನಗಳು–ವಿದ್ಯಾ ಮಂತ್ರಿಗಳು ಎಲ್ಲದಕ್ಕೂ ಈ ಗುರುವೇ ಕಾರಕನು. ಅತ್ಯಂತ ಬಲಿಯಾದರೆ ಉನ್ನತ ವಿದ್ಯೆಗಳು, ವಿಶ್ವ ವಿದ್ಯಾಲಯಗಳು.

## ಜನ್ಮಗಳ ತಳಿವಳಿಕೆ

ಗುರುವು ಮೂರು ಜನ್ಮಗಳಿಗೂ ಕಾರಕನು. ಗುರುವು ಜಾತಕದಲ್ಲಿರುವ ರಾಶಿ. ಇದೇ ವರ್ತಮಾನ ಜನ್ಮವು. ಆ ರಾಶಿಯ ಹಿಂದಿನ ರಾಶಿಯಲ್ಲಿ ಯಾವ ಗ್ರಹ ಇದೆ ಅದನ್ನು ಹಿಡಿದು ಹಿಂದಿನ ಜನ್ಮದ ಚರಿತ್ರೆ. ಆ ರಾಶಿಯ ಮುಂದಿನ ರಾಶಿಯ ಗ್ರಹಗಳಿಂದ ಮುಂದಿನ ಜನ್ಮದ ಲಕ್ಷಣ. ಹೀಗೆ ಈ ಮೂರು ಜನ್ಮಗಳೂ ಗುರುವಿನಿಂದಲೇ ಗೊತ್ತಾಗುವುದು.

ಮಕ್ಕಳು, ಅವರ ಸಂಖ್ಯೆ, ಆಗುನ ವಯಸ್ಸು ಇವೆಲ್ಲವೂ ಈ ಗುರುವನ್ನೇ ಆಶ್ರಯಿಸಿಕೊಂಡಿವೆ. ಜೊತೆಯಲ್ಲಿನ ಗ್ರಹಗಳಿಂದ ಮಕ್ಕಳ ಸ್ವಭಾವ, ಹೆಸರು, ಇತ್ಯಾದಿ. ಮಕ್ಕಳು ಹುಟ್ಟುವ ಜಾಗ, ಆಸ್ಪತ್ರೆ ಕೂಡ ಈ ಗ್ರಹದಿಂದಲೇ ಗೊತ್ತಾಗುವುದು. ಯಥಾರೀತಿ ಸೂಲಗಿತ್ತಿ, ಹೆರಿಗೆಯ ಲಕ್ಷಣ ಇವೆಲ್ಲವೂ ಈ ಗುರುವನ್ನೇ ಆಶ್ರಯಿಸಿವೆ.

## ಶುಭಾ ಶುಭ ಯೋಗಗಳು

ಗುರುವೇ ಅಣ್ಣನು. ಹಾಗಿಲ್ಲ ಮಗನು. ಅಣ್ಣನಿಲ್ಲದೇ ತಾನೇ ಜ್ಯೇಷ್ಠನಾದರೆ ಗುರುವು ಯೋಗಿಸಲಾರನು. ಇವನು ಕರ್ಮಿ. ಹಾಗೆಯೇ ಗಂಡು ಮಗನಿಲ್ಲದ ಜಾತಕ. ಗುರುವು ತನ್ನ ಕಾಲದಲ್ಲಿ ಯೋಗಿಸುನುದಿಲ್ಲ. ಬ್ರಹ್ಮಶಾಪ ಮಹಿಮೆಯಿಂದ ಈ ಪರಿಣಾಮ. ಗುರುವಿ ನ ಅವಯೋಗವಿದ್ದಲ್ಲಿ ಬ್ರಹ್ಮ ಶಾಪ ನಿವೃತ್ತಿಕರ ಶ್ರೀ ಕೃಷ್ಣನ ಆರಾಧನೆ. ಶ್ರೀಮತ್ ಭಾಗವತಪಾರಾಯಣ. ಹರಿಭಕ್ತನ ಸೇವೆ ಇವುದಳಿಂದ ಮಕ್ಕಳಾಗುವುದು, ಸಂದೇಹವಿಲ್ಲ.

ಶ್ರೀಕೃಷ್ಣ ದ್ವೇಷಿಗೆ ಗುರುವು ಎಂತಹ ಬಲಿಷ್ಠನಾದರೂ ಯೋಗಿಸುವುದಿಲ್ಲ. ವಿದ್ಯೆಗಾಗಲೀ ಮಕ್ಕಳಿಗಾಗಲೀ ಗೌರವಕ್ಕಾಗಲೀ ಧನಿಕರ ಸಹವಾಸಕ್ಕಾಗಲೀ ನ್ಯಾಯ ದೊರೆಯಲಾಗಲೀ ಶ್ರೀ ಕೃಷ್ಣನನ್ನೇ ಆರಾಧಿಸಬೇಕು.

ಕೃಷ್ಣಾಯ ಯಾದವೇಂದ್ರಯ ಜ್ಞಾನ ಮುದ್ರಾಯ ಯೋಗಿನೇ
ನಾಥಾಯ ರುಕ್ಮಿಣೇಶಾಯ ನಮೋ ವೇದಾಂತ ವೇದಿನೇ ॥

( ಆಧಾರ ಗ್ರಂಥ ಶ್ರೀಮತ್ ಭಾಗವತ )

## "ಗೋಚರ" ಎಂದರೇನು?

ಆಕಾಶವು ವಿಶಾಲ. ನಕ್ಷತ್ರಗಳು ಗುಂಪು ಗುಂಪುಗಿ ಈ ಆಕಾಶದಲ್ಲಿವೆ. ಅಶ್ವಿನ್ಯಾದಿಯಾಗಿ ರೇವತಿಯವರೆಗೆ ಇಪ್ಪತ್ತೇಳು ನಕ್ಷತ್ರಗಳು. ಈ ನಕ್ಷತ್ರಗಳು ಚಕ್ರಾಕಾರವಾಗಿ ಸುತ್ತುಗಟ್ಟಿವೆ. ರವ್ಯಾದಿ ನವಗ್ರಹಗಳು ಈ ಚಕ್ರದಲ್ಲಿ ಸುತ್ತುತ್ತವೆ. ಈ ನಕ್ಷತ್ರ ಚಕ್ರಕ್ಕೆ " ಭ ಚಕ್ರ " ಎಂದು ಹೆಸರು. ಈ ಚಕ್ರವ್ಯೂಹದಲ್ಲಿ ನವಗ್ರಹಗಳ ಚಲನೆಗೆ "ಗೋಚಾರ" ಎಂದರು.

## ಚಂದ್ರನೇ ಫಲಕೇಂದ್ರ

ಗ್ರಹಗಳು ಸುತ್ತುವಾಗ ಅವುಗಳ ಕಿರಣದಳು ಬೇರೆ ಬೇರೆ ಕೋನಗಳಿಂದ ಬರುತ್ತವೆ. ಈ ಕಿರಣಗಳ ಪರಿಣಾಮ ಚಂದ್ರನ ಮೇಲೆ. ಈ ಚಂದ್ರನು ಮನಸ್ಸಿಗೆ ಕಾರಕ. ಈ ಮನಸ್ಸಿನ ಮೇಲೆ ಈ ಗ್ರಹಗಳು ಕೆಲಸ ಮಾಡುತ್ತವೆ. ಕೋಟಿ ಕೋಟಿಯಾಗಿ ಮನುಷ್ಯರಿದ್ದಾರೆ. ಎಲ್ಲರಿಗೂ ಮನಸ್ಸೇ ಮುಖ್ಯ. ಒಬ್ಬರ ಮನಸ್ಸು ಇದ್ದ ಹಾಗೆ ಮತ್ತೊಬ್ಬರದು ಇಲ್ಲ. ಅವರವರ ಮನಸ್ಸು ಅವರವರ ನಕ್ಷತ್ರಕ್ಕೆ ಹೊಂದಿರುತ್ತದೆ. ನಕ್ಷತ್ರಕ್ಕೆ ಹೊಂದಿರುತ್ತದೆ. ಇದಕ್ಕೆ "ಜನ್ಮ ನಕ್ಷತ್ರ" ಎಂದರು.

ಇದರ ಮೇಲೆ, ಸಂಚಾರ ಮಾಡುತ್ತಿರುವ ಗ್ರಹಗಳ ಪರಿಣಾಮ. ಚಂದ್ರನಿಂದ ಈ ಗ್ರಹಗಳ ಫಲ ಚಂದ್ರನೇ ಕೇಂದ್ರ. ಆದುದರಿಂದಲೇ ಈ ಕೇಂದ್ರಕ್ಕೆ "ಗೋಚರ ನಕ್ಷತ್ರ", ಆದಿರುವ ರಾಶಿಗೆ "ಗೋಚಾರ ರಾಶಿ" ಎಂದು ಹೆಸರು.

## ಗುರುವೇ ಪ್ರಧಾನ

ಸೂರ್ಯನು ಆಕಾಶದಲ್ಲಿ ನಕ್ಷತ್ರ ಪಥದಲ್ಲಿ ಸುತ್ತುತ್ತಾನೆ. ಒಂದು ಸಲ ಸುತ್ತುವುದಕ್ಕೆ ಬೇಕಾಗುವ ಕಾಲಕ್ಕೆ ಒಂದು "ವರುಷ" ಎಂದರು. ಇಷ್ಟೇ ಕಾಲದಲ್ಲಿ ಗುರುವು ಒಂದು ರಾಶಿಯನ್ನು ದಾಟುತ್ತಾನೆ. ಅವನಿಗೆ ಪೂರ್ಣ ಸುತ್ತಿಬರಲು ಹನ್ನೆರಡು ವರ್ಷಕಾಲ ಬೇಕು. ಇತರ ಗ್ರಹಗಳೂ ಸುತ್ತುತ್ತವೆ. ಆದರೆ ಅವುಗಳ ಗತಿ ಗಣಿತಕ್ಕೆ ಅನುಕೂಲ ಕಡಿಮೆ. ಆದುದರಿಂದ ಗುರುವನ್ನೇ ಪ್ರಧಾನವಾಗಿ ಹಿಡಿದರು. ಒಂದೊಂದು ರಾಶಿಯಲ್ಲಿ ಗುರುವು ಒಂದೊಂದು ವರ್ಷ. ಆದುದರಿಂದ ಗುರುವನ್ನೇ ಹಿಡಿದು ಪಂಚಾಂಗಗಳು ಸಿದ್ಧವಾದವು. ಇದಕ್ಕೆ ಬಾರ್ಹಸ್ಪತ್ಯ ಪಂಚಾಂಗ ಎಂದು ಹೆಸರು. ಉತ್ತರ ಹಿಂದೂಸ್ತಾನದಲ್ಲಿ ಈಗಲೂ ಪ್ರಚಾರದಲ್ಲಿದೆ. ವರ್ಷ ವರ್ಷ ಫಲಗಳೂ ಈ ಗುರುವಿನ ಸಂಚಾರದಿಂದ ಸಿದ್ಧಿ ಆಗುತ್ತದೆ. ಜನ್ಮ ನಕ್ಷತ್ರ ಮತ್ತು ಜನ್ಮ ರಾಶಿಯಿಂದ ಹನ್ನೆರಡು ರಾಶಿಗಳಲ್ಲಿ ಗುರುವು ಸುತ್ತುತ್ತಾನೆ. ಪ್ರತಿಯೊಂದು ರಾಶಿಯಲ್ಲಿಯೂ ಒಂದೇ ರೀತಿಯಾದ ಫಲವಿಲ್ಲ. ರಾಶಿ ಬದಲಾದರೆ ಫಲವೂ ಬೇರೆ.

## ಗೋಚರದ ಉಪಯೋಗ

ಜನ್ಮ ಕಾಲದಲ್ಲಿ ಗ್ರಹಗಳು "ಭ" ಚಕ್ರದಲ್ಲಿರುವ ನಕ್ಷಗೆ "ಜಾತಕ" ಎಲ್ಲರಿಗೂ ಜಾತಕಗಳಿವೆಯೇ? ಅಸಾಧ್ಯ. ಅವಕಾಶ, ಅನುಕೂಲವಿದ್ದರೆ ಈ ಜಾತಕವನ್ನು ಬರೆಸುತ್ತಾರೆ. ಕೆಲವರಿಗೆ ಇದೆ ಕೆಲವರಿಗೆ ಇಲ್ಲ. ಆದರೆ ಕಷ್ಟ ಸುಖಗಳನ್ನು ತಿಳಿಯಬೇಕು. ಈ ಕುತೂಹಲ ಮಾತ್ರ ಎಲ್ಲರಿಗೂ ಇದೆ. ಹಿಂದಿನ ಕಾಲದಲ್ಲಿ ಹೆಸರಿಟ್ಟು ಆ ಹೆಸರಿನಿಂದ ನಕ್ಷತ್ರವನ್ನು ತಿಳಿಯುತ್ತಿದ್ದರು.

ಪ್ರತಿಯೊಂದು ಹಳ್ಳಿಯಲ್ಲಿ ಪುರೋಹಿತರು ಇರುತ್ತಾರೆ. ಶ್ಯಾನುಭೋಗರೆ

ಈ ಕೆಲಸವನ್ನು ಮಾಡುತ್ತಾರೆ. ಮಗು ಹುಟ್ಟಿತು. ಅವರಲ್ಲಿಗೆ ಹೋಗಿ ತಂದೆಯು, "ದಿನ ನಕ್ಷತ್ರ ಸ್ವಲ್ಪ ನೋಡಿ" ಎಂದು ಕೇಳುತ್ತಾನೆ. ಆಗ ಅವರು ಪಂಚಾಂಗ ತೆಗೆದು "ಗುರುವಾರ ಪುಷ್ಯ ನಕ್ಷತ್ರ" ಎನ್ನುತ್ತಾರೆ. ''ಹೆಸರೇನಿಡಬೇಕು?" ಅವರು ''ಹು-ಹೆ-ಹೂ-ಡ" ಎಂದರು. ಈ ನಾಲ್ಕು ಅಕ್ಷರಗಳಲ್ಲಿ ಮೊದಲಿನ ಅಕ್ಷರವಿಟ್ಟು ಹೆಸರು. ಹುಚ್ಚಪ್ಪ. ಹೆತ್ತಪ್ಪ ಹೊನ್ನಯ್ಯ, ಡಕ್ಕಣ್ಣ. ಈ ರೀತಿ ಹೆಸರುಗಳು, ಆ ದಿನದ ನಕ್ಷತ್ರಕ್ಕೆ ಅನುಗುಣವಾಗಿ ಚಾಲತಿ ಆದುವು. ಇದಕ್ಕೆ "ನಾಮ ನಕ್ಷತ್ರ" ಎಂದರು.

ಏನೇ ಕಷ್ಟ ಬರಲಿ ಅವರಲ್ಲಿ ಹೋಗಿ ಕೇಳುತ್ತಾನೆ. "ಹೆಸರೇನು?" ಎಂದರು. ಹೆತ್ತಪ್ಪ "ಓಹೋ ನ್ನಿನ್ನದು ಕಟಕ ರಾಶಿ." ಈಗ ಗುರು ಎಂಟನೆಯ ಮನೆಯಲ್ಲಿದ್ದಾನೆ. ನಿಮಗೆ ಕಷ್ಟ. ನಿನ್ನ ಮನೆ ದೇವರನ್ನು ಪೂರಜೆಮಾಡಬೇಕು ಎಂದು ಉಪಾಯ ಹೇಳುತ್ತಾರೆ. ಯಾರು ಬರಲಿ, ಏನು ಕೇಳಲಿ? ಗುರು ಶನಿಗಳು ಚೆನ್ನಾಗಿರಬೇಕು ಎಂದರು.

---

# 19

## ಹನ್ನೆರಡು ವರ್ಷ ಚಕ್ರ

ಏನು ಮಾಡಿದರೂ ಮಗಳಿಗೆ ಗಂಡು ಸಿಗುವುದಿಲ್ಲ. ತಂದೆಯ ಪೇಚು. ತಾಯಿ, "ಗುರುಬಲ ಇದೆಯೇನೋ ಕೇಳಬಾರದೇ"? ಎನ್ನುತ್ತಾಳೆ. ಗುರು ದೈವಿಕ ಗ್ರಹ. ಈ ಗ್ರಹದ ಬಲವಿದೆ, ದೇವರನುಗ್ರಹ ಇದೆ. ಏನಾದರೂ ಕೆಲಸಕ್ಕೆ ಪ್ರಯತ್ನ ಮಾಡಬಹುದು. ಇದೇ ರೂಢಿಯಲ್ಲಿ ಬಿದ್ದ ನಂಬಿಕೆ. ವರ್ಷಗಳು ಉರುಳುತ್ತವೆ, ಪ್ರತಿವರ್ಷ ಬದಲಾಗುತ್ತೆ. ಈ ಗುರುವಿಗೂ ಅಷ್ಟೇ. ಇದರಿಂದ ಫಲಗಳನ್ನು ಹೇಳುತ್ತಾರೆ. ಜೀವನದ ಘಟನೆಗಳನ್ನು ತಿಳಿಯುತ್ತಾರೆ.

### ಜಾತಕದಲ್ಲಿ ವರ್ಷ ಫಲ

ಸಮುದ್ರದಲ್ಲಿ ಅಗಾಧವಾದ ನೀರು. ನಮ್ಮ ಕೈ ಎಷ್ಟಿದೆ ಅಷ್ಟು ಮಾತ್ರ ನಿಲ್ಲುತ್ತೆ. ಶಾಸ್ತ್ರವೂ ಅಷ್ಟೇ. ಬ್ರಹ್ಮಾಂಡದಲ್ಲಿನ ವಿಶಿಷ್ಟ ವಿಚಾರವೂ ಅದರಲ್ಲಿದೆ. ನಮ್ಮ ಬುದ್ದಿಗೆ ನಿಲುಕುವಷ್ಟು ಮಾತ್ರ ನಮಗೆ ಗೊತ್ತಾಗುತ್ತದೆ.

ಜನ್ಮ ಕಾಲದ ಗ್ರಹಗಳ ನಕ್ಷೆಗೆ ಜಾತಕ ಎಂದರು. ಈ ನಕ್ಷೆಯಿಂದ ಪ್ರತಿಯೊಂದು ಗ್ರಹದ ಫಲಗಳನ್ನು ಹೇಳಿದರು. ಈ ಫಲಗಳನ್ನು ತಿಳಿಯುವ ಮಾರ್ಗಗಳು ಎಷ್ಟೋ, ಕೆಲವು ಮಾರ್ಗಗಳಲ್ಲಿ ಫಲಗಳು ಅನುಭವ ಆಗಬಹುದು, ಆಗದಿರಬಹುದು. ಲೋಕದಲ್ಲಿ ಸಾವಿರಾರು ಜನಗಳು ಜ್ಯೋತಿಷ್ಯ ತಿಳಿದವರು.

ಎಲ್ಲಾ ಮಾರ್ಗಗಳು ಒಬ್ಬನಿಗೇ ತಿಳಿಯುತ್ತೆಯೇ? ಇಲ್ಲ. ಅವರ ಮಾರ್ಗದಲ್ಲಿ ಅನುಭವದಿಂದ ಫಲ ಹೇಳುತ್ತಾರೆ.

ಸಾಕಷ್ಟು ಖಚಿತವಾಗಿರಬೇಕು. ರೀತಿಯೂ ಸುಲಭವಿರಬೇಕು. ಗಣಿತದ ಸಿಕ್ಕು ಇರಬಾರದು. ಇದಕ್ಕೆ ಈ ಗುರುವಿನ ಕ್ರಮವೇ ಸಾಕ್ಷಿ. ವರ್ಷಕ್ಕೆ ಒಂದು ರಾಶಿಯಲ್ಲಿ ಇರುತ್ತಾನೆ. ಆ ರಾಶಿಯ ಫಲ ಆ ವರ್ಷ, ಹೀಗೆ ಹನ್ನೆರಡು ರಾಶಿಗಳಲ್ಲಿ ಹನ್ನೆರಡು ವರ್ಷಗಳ ಫಲವನ್ನು ಹೇಳಿದರು. ಈ ಕಾರಣದಿಂದಲೆ "ಹನ್ನೆರಡು ವರ್ಷ ಪಟ್ಟ"ಎಂದರು. ಒಂದು ಹನ್ನೆರಡು ವರ್ಷ ಚಕ್ರ ಒಂದು ತರಹೆ, ಮತ್ತೊಂದು ಹನ್ನೆರಡು ವರ್ಷ ಚಕ್ರ ಮತ್ತೊಂದು ತರಹೆ.

## ಹನ್ನೆರಡು ವರ್ಷ ಚಕ್ರದ ಮಹತ್ವ

ಜನ್ಮ ಜಾತಕದಲ್ಲಿ ಹನ್ನೆಹದು ರಾಶಿಗಳು. ನವಗ್ರಹಗಳು ಅಲ್ಲಲ್ಲಿ ಇರುತ್ತವೆ. ಈಗ ಗುರುವು ಒಂದು ರಾಶಿಯಲ್ಲಿರುತ್ತಾನೆ. ಆ ರಾಶಿಯಲ್ಲಿರುವ ಗ್ರಹದ ಫಲವನ್ನು ಕೊಡುತ್ತಾನೆ. ಆಯಾ ಗ್ರಹಗಳಿಗೆ ಜೀವವನ್ನು ಕೊಡುತ್ತಾನೆ. "ಜೀವ" ಎಂದರೆ ಗುರು. ಆ ಗ್ರಹಕ್ಕೆ ಜೀವ ಉಂಟಾಗಿ ಚೇತನ ಹುಟ್ಟುತ್ತೆ. ಫಲ ಕೊಡುತ್ತಾನೆ. ಪುನಃ ಆ ಗ್ರಹದ ಫಲ ನಡೆಯಬೇಕು. ಪುನಃ ಗುರುವು ಆ ರಾಶಿಗೆ ಬರಬೇಕು. ಇದಕ್ಕೆ ಹನ್ನೆರಡು ವರ್ಷ ಆಗಬೇಕು. ಹೀಗೆ ಹನ್ನೆರಡು ವರ್ಷಕ್ಕೆ ಒಂದು ಸಲ ಗ್ರಹದ ಫಲಗಳು ಮತ್ತೆ ಮತ್ತೆ ನಡೆಯುತ್ತವೆ.

ಈಗ ಉದಾಹರಣೆ : ತುಲಾ ಲಗ್ನದಲ್ಲಿ ಜನನ. ಮಿಥುನದಲ್ಲಿ ಗುರು ಕಟಕದಲ್ಲಿ ಶನಿ, ಮೇಷದಲ್ಲಿ ಕುಜ ರವಿ, ವೃಷಭದಲ್ಲಿ ಶುಕ್ರ, ಚಂದ್ರಕೇತು. ಮೀನದಲ್ಲಿ ಬುಧ. ವೃಶ್ಚಕದಲ್ಲಿ ರಾಹು. ಈ ಜಾತಕದಲ್ಲಿ ಮೇಷದಲ್ಲಿ ಕುಜ ರವಿಗಳು ಇದ್ದಾರೆ. ಇಲ್ಲಿ ಗುರುವು ಮಿಥುನ ರಾಶಿಯಲ್ಲಿದ್ದಾನೆ. ಈ ಗುರುವು ಮೇಷ ರಾಶಿಗೆ ಬರಬೇಕು. ಹತ್ತು ವರ್ಷ ಆಗಬೇಕು. ಆಗ ಕುಜ ರವಿಗಳಿರುವ ಜಾಗಕ್ಕೆ ಗುರುವು ಬರುತ್ತಾನೆ. ಈಗ ಕುಜ ರವಿಗಳ ಫಲ ನಡೆಯಬೇಕು. ಹನ್ನೆರಡು ವರ್ಷಕ್ಕೆ ಸರಿಯಾಗಿ ಮತ್ತೆ ಈ ರಾಶಿಗೆ ಬರತ್ತಾನೆ. ಹತ್ತು, ಇಪ್ಪತ್ತೆರಡು,

ಮೂವತ್ತನಾಲ್ಕು, ನಲ್ವತ್ತಾರು ಇತ್ಯಾದಿ ವರ್ಷಗಳಲ್ಲಿ ಈ ರಾಶಿಯಲ್ಲಿ ಗುರು ಇರುತ್ತಾನೆ.

ರವಿಯು ಉದ್ಯೋಗಕಾರಕ. ಗುರುವು ರವಿಯ ರಾಶಿಗೆ ಬಂದಾಗ ಉದ್ಯೋಗ ಸಿಗುತ್ತದೆ. ತನ್ನ ಹತ್ತನೆಯ ವಯಸ್ಸುಉದ್ಯೋಗಕ್ಕೆ ಚಿಕ್ಕದಾಯಿತು. ಇಪ್ಪತ್ತೆರಡನೆಯ ವಯಸ್ಸಿನಲ್ಲಿ ಉದ್ಯೋಗ ಆಗುತ್ತೆ. ಧನುರಾಶಿಯಲ್ಲಿ ಯಾವ ಗ್ರಹವೂ ಇಲ್ಲ. ಇದು ಕುಜ ರವಿಗಳ ತ್ರಿಕೋನರಾಶಿ . ಇಲ್ಲಿಯೂ ಅದೇ ಫಲ ನಡೆಯ ಬೇಕು. ಉದ್ಯೋಗ ಬಡ್ತಿಯಾಗುತ್ತೆ. ಉನ್ನತ ಅಧಿಕಾರ ಪ್ರಾಪ್ತಿ ಆಗುತ್ತೆ. ಆಗ ಪುನಃ ಮೇಷದಲ್ಲಿ ಬಂದರೆ ಮತ್ತೂ ಒಳ್ಳೆಯದೇ ಆಗುತ್ತದೆ.

ಅಂತೆಯೇ ವೃಷಭರಾಶಿಯಲ್ಲಿ ಶುಕ್ರ. ಈ ರಾಶಿಯಲ್ಲಿ ಗುರು ಬಂದಾಗ ವಿವಾಹಯೋಗ. ಇಪ್ಪತ್ತ ಮೂರು ವರ್ಷಗಳ ನಂತರ ಈ ಯೋಗ.ಹೀಗೆಯೇ ಶನಿಗ್ರಹ ಕಟಕ ರಾಶಿ. ಈ ರಾಶಿಗಳಲ್ಲಿ ಗುರು ಬಂದರೆ ಮನೆಯಲ್ಲಿ ಸಾವು ನೋವುಗಳು, ಇತ್ಯಾದಿ.

ಈ ರೀತಿಯಾಗಿ ಗುರು ಗ್ರಹದ ಸಂಚಾರ, ಇದರಿಂದ ಫಲ ಹೇಳುವ ಕ್ರಮ. ರಾಶಿಗಳಲ್ಲಿ ಗ್ರಹವಿಲ್ಲದಿದ್ದಲ್ಲಿ ಆ ರಾಶಿಯ ಅಂಶ ಗ್ರಹಗಳ ಫಲವು ನಡೆಯುವುದು.

ಹನ್ನೆರಡು ರಾಶಿಗಳು. ನೂರೆಂಟು ನವಾಂಶಗಳಿಗೆ ಗಣಿತ ಮಾಡಿದರೆ, ನೂರೆಂಟು ವರ್ಷಕ್ಕೆ ಪ್ರತಿ ವರ್ಷ ಫಲವನ್ನು ಹೇಳಬಹುದು. ಈ ಕಾರಣದಿಂದ ಒಂದು ಅಂಶ ಒಂದು ವರ್ಷಕ್ಕೆ ಸಮ. ಇದೇ ಪ್ರಮಾಣ ಆಯಿತು. ರಾಶಿಗೆ ಒಂಬತ್ತು ವರ್ಷ, ಒಂಭತ್ತು ಅಂಕಗಳಿಗೆ ಸಮ. ಪೂರ್ಣಾಂಕಗಳು, ಹನ್ನೆರಡು ಹತ್ತು ಇಪ್ಪತ್ತು ಇತ್ಯಾದಿ. ಹೀಗೆ ನೂರ ಇಪ್ಪತ್ತು ವರ್ಷಗಳನ್ನೂ ಹನ್ನೆರಡು ರಾಶಿಗಳಲ್ಲಿ ಎಣಿಸಿದರು.

---

# 20

## ನೀಚರಾಶಿ ಗ್ರಹಗಳ ಯೋಗ

### ನೀಚ ರಾಶಿ ಗ್ರಹಗಳ ಯೋಗ

ಶಾಪ, ಅನುಗ್ರಹ ಎರಡು ಬಗೆ. ಗ್ರಹವು ಮನುಷ್ಯನ ರೂಪದಲ್ಲಿ ಫಲ ಕೊಡುತ್ತೆ. "ದೈವಂ ಮಾನುಷ ರೂಪೇಣ" ಎಂದರು. ಗುರು ವಿದ್ಯಾದಾತನು. ಗುರುವನ್ನು ಹೀನ ದೃಷ್ಟಿಯಿಂದ ನೋಡುವುದು, ಹಾಸ್ಯ ಮಾಡುವುದು, ಅವರಿಗೆ ದಕ್ಷಿಣೆ ಕೊಡದೆ ಗೋಳಾಡಿಸುವುದು. ಈ ರೀತಿ ಗುರು ಅಪಚಾರಗಳು ಎಷ್ಟೋ. ಆಗ ಗುರುವಿನ ಈ ಶಾಪ. ಅದೇ ರೀತಿ ಗುರುಗಳನ್ನು ಸೇವೆ ಮಾಡುವುದು. ಅವರು ಸುಖವಾಗಿರುವಂತೆ ಮಾಡುವುದು. ಇಂತಹ ಗುರು ಉಪಚಾರಗಳೂ ಇವೆ. ಈ ಅಪಚಾರ ಉಪಚಾರಗಳಿಂದ ಶಾಪ ಅನುಗ್ರಹಗಳು.

ಗುರು ಅನುಗ್ರಹಕ್ಕೆ ಪಾತ್ರರು ಗುರುವು ಉಚ್ಚ ರಾಶಿಯಲ್ಲಿರುವಾಗ ಹುಟ್ಟುವರು. ಶಾಪಕ್ಕೆ ಸಿಕ್ಕವರು ನೀಚರಾಶಿಯಲ್ಲಿ ಗುರು ಇರುವಾಗ ಹುಟ್ಟು ತ್ತಾರೆ. ಗುರು ಗ್ರಹಕ್ಕೇ ಸಲ್ಲುವ ನೀಚತ್ವ ಆಗಲೀ ಉಚ್ಚತ್ವವಾಗಲೀ ಇಲ್ಲ. ಆ ಗ್ರಹದ ಗುಣ ವಿಶೇಷಗಳು ಪ್ರಾಪ್ತಿ ಆಗುವುದಿಲ್ಲ. ಗುರು ಬಲವಿದ್ದರೆ

ಒಳ್ಳೆಯ ವಿದ್ಯೆ, ನಡತೆ, ಗುಣ, ದೇವತಾ ಭಕ್ತಿ. ಬಲವಿಲ್ಲ, ಯಾವುದೂ ಇಲ್ಲ. ಆ ಗುಣಗಳ ಮೇಲೆ ಅಸಡ್ಡೆ, ಅನಾದರಣೆ.

ಅಂತೆಯೇ ಎಲ್ಲ ಗ್ರಹಗಳಿಗೂ ಫಲ. ರವಿ ಎಂದರೆ ತಂದೆ. ಚಂದ್ರನೆಂದರೆ ತಾಯಿ. ಕುಜ ಸೋದರ, ಬುಧ ಮಾವ, ಮಿತ್ರ ಬಂಧುಗಳು. ಶುಕ್ರ ಹೆಂಡತಿ ಶನಿ ಊಳಿಗದವನು ಇತ್ಯಾದಿ. ಈ ಜನಗಳ ಶಾಪ ಅನುಗ್ರಹಗಳೂ ಮೇಲಿನಂತೆಯೇ. ಈಗ ಮೇಲೆ ಹೇಳಿದ ಉದಾಹರಣೆಯಲ್ಲಿ ಬುಧನು ಮೀನರಾಶಿಯಲ್ಲಿದ್ದಾನೆ. ಇದು ಅವನಿಗೆ ನೀಚರೀತಿ ಸಂಚಾರ ಆಯಿತು.

ಮಿಥುನದಲ್ಲಿಯ ಗುರು ಮೀನಕ್ಕೆ ಬರಲು ಒಂಬತ್ತು ವರ್ಷ. ಹತ್ತನೆಯ ವರುಷ ಇಪ್ಪತ್ತೆರಡು, ಮೂವತ್ತನಾಲ್ಕು, ನಲ್ವತ್ತಾರು ಈ ವರ್ಷಗಳಲ್ಲಿ ಗುರುವು ಬುಧನಿರುವ ರಾಶಿಯಲ್ಲಿ ಬರುತ್ತಾನೆ. ಈ ಕಾಲದಲ್ಲಿ ಗೃಹ ಬದಲು. ಅನ್ಯಗೃಹವಾಸ. ಬಾಡಿಗೆ ಕೊಟ್ಟು ವಾಸ ಇತ್ಯಾದಿ ಚರ್ಮವ್ಯಾಧಿ, ಬುದ್ಧಿ ಚಾಪಲ್ಯ, ಚಿಂತೆ ಇತ್ಯಾದಿ ಫಲಗಳು ನಡೆಯುತ್ತವೆ. ಬಂಧುಗಳಲ್ಲಿ ಕಷ್ಟ. ಸಾವು ನೋವುಗಳೂ ಅನುಭವಕ್ಕೆ ಬರುತ್ತವೆ.

ಈ ಬುಧನಿಗೆ ಶಾಂತಿ ಮಾಡಬೇಕು. ಬಂಧುಗಳಲ್ಲಿ ತನ್ನ ಮನೋವೃತ್ತಿ ಉತ್ತಮಗೊಳಿಸಬೇಕು. ಅವರ ಬಗ್ಗೆ ಸಹಾನುಭೂತಿ ಸಹಕಾರ ಹೊಂದಬೇಕು. ಹೀಗೆ ಮಾಡಿದರೆ ಮರಳಿ ಗುರು ಬಂದಾಗ ಗೃಹಪ್ರಾಪ್ತಿ. ಬಂಧು ಕಲ್ಯಾಣ ಇತ್ಯಾದಿ ಶುಭ ಫಲಗಳೇ ನಡೆಯುತ್ತವೆ.

ಈ ರೀತಿ ಗಣಿತ ಗೊಂದಲ ಇಲ್ಲದೇ ಫಲ ಹೇಳಬಹುದು. ಇದೇ ರೀತಿಯಾಗಿ "ಗುರುನಾಡಿ"ಯಲ್ಲಿ ಜೀವನದ ಪ್ರತಿ ವರ್ಷ ಫಲಗಳನ್ನು ಹೇಳಿದರು.

ಅನಾಚಾರ, ಗುರುವಿನಲ್ಲಿ ಅನಾದರಣೆ, ವಿಷ್ಣು ದ್ವೇಷ ಇವುಗಳ ಪರಿಣಾಮ ಶಾಪ. ಆಗ ಈ ಗ್ರಹದ ಫಲಗಳು ನಡೆಯಲಾರವು. ಅಶುಭ ಫಲಗಳು ಮಾತ್ರ ಅನುಭವ ಆಗುತ್ತೆ.

ದಶಾಫಲಗಳನ್ನು ಹೇಳುವಾಗಲೂ ಈ ಕ್ರಮ ಒಳ್ಳೆಯದು. ಈಗ ಶನಿ, ಮೇಲೆ ಹೇಳಿದಂತೆ ಕಟಕದಲ್ಲಿದ್ದಾನೆ. ಆ ರಾಶಿಯಿಂದ ವರ್ಷಕ್ಕೆ ಒಂದು ರಾಶಿಯಂತೆ ಎಣಿಸಿ ಅಲ್ಲಿ ಬಂದ ಗ್ರಹಗಳ ಫಲಗಳನ್ನು ಹೇಳಬಹುದು. ಶನಿಯಿಂದ ಎರಡನೆಯ ರಾಶಿ ಸಿಂಹ. ಈ ಸಿಂಹದಲ್ಲಿ ಯಾವ ಗ್ರಹವೂ ಇಲ್ಲ. ಮೇಷವು ತ್ರಿಕೋಣ ರಾಶಿ. ಅಲ್ಲಿ ಕುಜ ರವಿಗಳು, ಈಗ ಶನಿದೆಶೆಯಲ್ಲಿ ಎರಡನೆಯ ವರುಷ ನಡೆಯುವಾಗ ಉದ್ಯೋಗ ಅಭಿವೃದ್ಧಿ, ಉನ್ನತ ಅಧಿಕಾರ ಲಾಭ ಇತ್ಯಾದಿ ಫಲಗಳು ನಡೆಯುತ್ತವೆ. ಅಂತೆಯೇ ಕನ್ಯಾ, ತುಲಾ ಇತ್ಯಾದಿ.

ಗುರುವು ಜ್ಞಾನದಾತನು. ವಿಷಯ ತಿಳಿಯದು. ಆಗ ಈ ಗುರು ಗ್ರಹವನ್ನೇ ನೋಡಬೇಕು. ಆಗ ಆ ವಿಷಯವು ಸ್ಪಷ್ಟವಾಗಿ ತಿಳಿಯುತ್ತದೆ. ಹೀಗೆ ಜ್ಯೋತಿಷ್ಯ ಶಾಸ್ತ್ರದಲ್ಲಿ ಗುರುವು ಬಹು ಪ್ರಮುಖ ಸ್ಥಾನವನ್ನುಗಳಿಸಿದ್ದಾನೆ.

"ದೋಷಾಂಬುರಾಶಿ ತರಣಾಯ ಕೃಪಾರ್ದ್ರ ಚೇತಾ।
ಪೋತಂ ಸಸರ್ಜ ಗುರು ಶುಕ್ರಮಯಂ ವಿಧಾತಾ"॥

ಎಂದರು ವಿದ್ಯಾರಣ್ಯರು.

ಸಕಲ ಜನಗಳಿಗೂ ಅನುಕೂಲವಾಗಬೇಕು. ಕಷ್ಟ ಎನ್ನುವುದು ಮಹಾಸಮುದ್ರ, ಅದನ್ನು ದಾಟಲು ಬ್ರಹ್ಮದೇವರು ಗುರು ಶುಕ್ರ ಗ್ರಹಗಳನ್ನೇ ದೋಣಿಯನ್ನಾಗಿ ಮಾಡಿದರಂತೆ. ಗುರುವು ಸರ್ವದಾ ಶುಭನು. ಶುಭ ಕೋರುವವನು.

ನಿಶ್ಶೇಷ ದೋಷ ಹರಣೇ ಶುಭವರ್ಧನೇ ಚ।
ವೀರ್ಯಂ ಗುರೋರಕಧಿ ಮಸ್ತಿ ಅಖಿಲ ಗ್ರಹೇಭ್ಯ॥।

ಎಂದು ಗುರುವರ್ಯರಾದ ವಿದ್ಯಾರಣ್ಯರು ಹೇಳಿದರು. ಇದು ಸತ್ಯ. ಗುರುವೇ ಶುಭನು. ಅವನ ಅನುಗ್ರಹ ಸರ್ವತ್ರ ಒಳ್ಳೆಯದು. ಈ ಕಾರಣ ಗುರುವನ್ನು ಎಲ್ಲರೂ ಆಶ್ರಯಿಸಬೇಕು.

# 21

## ಶುಭಕಾರಕನೇ ಶುಕ್ರ

ಪರೀಕ್ಷೆಯಲ್ಲಿ ಚೆನ್ನಾಗಿಯೇ ಬರೆದಿದ್ದಾನೆ. ಫಸ್ಟ್ ಕ್ಲಾಸಿನಲ್ಲಿಯೇ ಬರಬೇಕು. ಅಷ್ಟು ಧೈರ್ಯ ಅವನಿಗೆ. ಬೆಳಿಗ್ಗೆ ಫಲಿತಾಂಶ. ಆದರೆ ರಾತ್ರಿ ನಿದ್ರಯೇ ಬಾರದು. ಗಂಟೆ ಗಂಟೆಗೆ ಏಳುತ್ತಾನೆ. ನಿಟ್ಟುಸಿರು ಬಿಡುತ್ತಾನೆ. ಅಷ್ಟು ಧೈರ್ಯ ಅವನಿಗೆ ಹೀಗೇಕೆ ಒದ್ದಲಾಡುತ್ತಾನೆ? ಫಲಿತಾಂಶ ಏನಾಗುತ್ತೆಯೋ? ನಂಬರೇ ಕಾಣಿಸದಿದ್ದರೆ? ಆಗ ಅವನ ಧೈರ್ಯ ಪಾತಾಳಕ್ಕೆ ಇಳಿಯುತ್ತೆ. ಎದೆ 'ಧಸಕ್' ಎನ್ನುತ್ತೆ.

ಶುಭವೋ ಅಶುಭವೋ? ಯಾರಿಗೆ ಗೊತ್ತು? ಅವನೇನೋ ಸರಿಯಾಗೇ ಬರೆದಿದ್ದಾನೆ. ಆದರೆ ಪರೀಕ್ಷಕರ ಕೈಹಿಡಿದು ನಂಬರು ಹಾಕಿಸಲು ಸಾಧ್ಯವೇ? ಇಲ್ಲ "ದೇವರೇ ನನ್ನ ಕಾಪಾಡು" ಎಂದು ಮನಸ್ಸಿನಲ್ಲಿಯೇ ಹಲಬುತ್ತಾನೆ.

ಈ ಫಲಿತಾಂಶಕ್ಕೆ ಅಷ್ಟು ಮಹಾತ್ಮ್ಯೆ ಎಂತಹವನನ್ನೂ ನಡುಗಿಸುತ್ತೆ. ಫಲಿತಾಂಶ ಬಂದಾಗ, ಬೆಳಗ್ಗೆ ಪಾಸಾಯಿತು. 'ಫಸ್ಟ್ ಕ್ಲಾಸ್' ಆಗಿದೆ. ಆಗ ಅವನ ಮನಸ್ಸಿನಲ್ಲಿ ಎಷ್ಟು ಆನಂದ! ಎಷ್ಟು ಸುಖ! ಎಷ್ಟು ಅಂತರ ಈ ಮನೋಭಾವಗಳಲ್ಲಿ?

ಈ ಸುಖ. ಈ ಆನಂದ. ಹಿಂದಿನ ಕಷ್ಟದ ಅನುಭವದಿಂದ. ಮೊದಲೇ ಆಫೀಸಿನಲ್ಲಿ ಫಲಿತ ತಿಳಿದಿತ್ತು. ಬೆಳಗ್ಗೆ ಅದೇ ಗೊತ್ತಾಗುತ್ತೆ. ಆಗ ಈ ಸುಖ ಇರುತ್ತೆಯೇ? ಇಲ್ಲ. ಆದುದರಿಂದ ಕಷ್ಟದಿಂದಲೇ ಸುಖದ ರುಚಿ.

## ಶುಕ್ರನಿಗೆ ಶನಿವೇಧೆ ಅನಿವಾರ್ಯ

ಕಷ್ಟವನ್ನು ತೋರಿಸುವವನೇ ಶನಿ. ಸುಖವನ್ನು ಕೊಡುವವನು ಶುಕ್ರ. ಇದು ಲೋಕ ರೂಢಿ. ಕಹಿ ಇಲ್ಲದೆ ಸಿಹಿ ಇಲ್ಲ. ಕಷ್ಟವಿಲ್ಲದೆ ಸುಖವಿಲ್ಲ. ಆದುದರಿಂದ ಸುಖಕ್ಕೆ ಕಷ್ಟವೇ ಮೂಲಕಾರಣ. ಈ ಗ್ರಹಗಳಿಗೆ ಪರಸ್ಪರ ಸಂಬಂಧ, ಅನಿವಾರ್ಯ.

ಕಷ್ಟ ಜಾಸ್ತಿ ಆದಷ್ಟು ಪರಿಣಾಮ ಸುಖವಾದರೆ ಆನಂದ. ಇದೇ ಶುಕ್ರನ ಸ್ವಭಾವ. ಅದಕ್ಕೆ ಇವನನ್ನು 'ಶುಭಗ್ರಹ' ಅಂದರು.

## ಸುಖಾಭಿಲಾಷೆ

ಶುಕ್ರನು ಸುಖಕಾರಕನು. ಸುಖದಲ್ಲಿ ಸ್ತ್ರೀ ಸುಖ ಬಹು ಪ್ರಿಯ. ಈ ಸುಖಕ್ಕಾಗಿ ಗಂಡಸರು ಆಸ್ತಿಪಾಸ್ತಿಗಳನ್ನು ಕಳೆಯುತ್ತಾರೆ. ಇದು ಭಗವಂತನ ಮಾಯೆ. ಸ್ತ್ರೀ ಸುಖಕ್ಕಾಗಿ ಈ ಶುಕ್ರ ಕಾರಣ.

ಸುಖಕ್ಕೆ ಕಷ್ಟ ಯಾವಾಗಲೂ ತಾಗಿರುತ್ತದೆ. ಒಂಟಿಯಾಗಿ ಶುಕ್ರನಿದ್ದರೆ ಅವನಿಗೆ ಶನಿಕಾಟವು ಇದ್ದೇ ಇರುವುದು. ಸ್ತ್ರೀಯರು ಒಂಟಿಯಾಗಿ ಓಡಾಡಲು ಭಯ. ಒಂಟಿಯಾಗಿ ಇರಲು ಭಯ. ಸ್ತ್ರೀ ಅಂದರೆ ಹೆದರಿಕೆಯ ಪ್ರತೀಕ. ಆದುದರಿಂದ ಜೊತೆಯಲ್ಲಿ ಆ ದೋಷ ನೀಗುವುದಕ್ಕೆ ಯಾರಾದರೂ ಬೇಕು.

ಜೊತೆಗೆ ಯಾರಾದರೂ ಇದ್ದರೆ ಅವನು ಬಹಳ ಸುಖಿ. ಕಷ್ಟನೀಗುವ ಸಾಮಗ್ರಿಗಳೆಲ್ಲಾ ಅಗತ್ಯ. ಇವನು ಮೊದಲು ಅದನ್ನು ಸಂಪಾದನೆ ಮಾಡುತ್ತಾನೆ. ಶನಿಯನ್ನು ತಡೆಗಟ್ಟಲು ಮಹಾವೀರ್ಯ ಗ್ರಹವಾದ ಕುಜನ ಸಂಗ ಇವನಿಗೆ ಬೇಕು. ಈ ಕುಜನೇ ಗಂಡು ಅಥವಾ ಗಂಡಸು. ಇವನೇ ಯಜಮಾನನು. 'ಸ್ತ್ರೀ' ಎಂದರೆ ಹೆಂಡತಿ, ಗಂಡನೇ ಯಜಮಾನನು. ಇವನ ಜೊತೆ ಇದ್ದರೆ

ಸ್ತ್ರೀಯು ಬಲಿಷ್ಠಳು.

## ಸುದರ್ಶನ ಚಕ್ರ

ಶುಕ್ರನು ಅಮೃತ ಗ್ರಹ ಅಮೃತಮಯನಾದ ವಿಷ್ಣುವು ಈ ಗ್ರಹದ ಅಂಶದಲ್ಲಿ ಜನಿಸಿದನು. ಇವನು ಮಾಯೆಯಿಂದ ಆವೃತನು. ಆದರೆ ಮಾಯೆಯ ಇವನ ಅಧೀನ. ಶನಿಯು ಶುಕ್ರನ ಅಧೀನ. ಈ ಶನಿ, ಮಾಯೆ ಅಥವಾ ಕತ್ತಲನ್ನು ಓಡಿಸಲು ಇವನು "ಸುದರ್ಶನ" ಚಕ್ರವನ್ನು ಪಡೆದಿದ್ದಾನೆ.

ಈ ಸುದರ್ಶನ ಚಕ್ರದಲ್ಲಿ 1000 ಸೂರ್ಯರೇ ಹಲ್ಲುಗಳ. ಈ ಮಹಾಚಕ್ರವನ್ನು 'ಸಹಸ್ರಾರ ಅಥವಾ ಸಹಸ್ರಾದಿತ್ಯ ಸಂಕಾಶಂ' ಎಂದರು. ಅತೀವ ತೇಜಸ್ಸಿನಿಂದ ಇದರ ಪ್ರಭೆ ಹೇಳತೀರದು. ಶುಕ್ರನು ರವಿಯೊಡನೇ ಶುಭನು! ಆದರೆ ರವಿಯ ಬಲ ಶುಕ್ರನಿಗಿಂತಲೂ ಕಡಿಮೆ. ಆ ರವಿಯ ಬಲವನ್ನು ಶುಕ್ರನೇ ತೆಗೆದುಕೊಳ್ಳುತ್ತಾನೆ. ಆದಕ್ಕೇ ಶುಕ್ರನ ರಾಶಿಯಲ್ಲಿ ರವಿಯು ನೀಚಸ್ಥಾನವನ್ನು ಹೊಂದುವನು. ಈ ರವಿಯನ್ನೇ ಪ್ರಾಣಿಯನ್ನಾಗಿಸಿ, ಮೃಗರಾಜನಾದ ಸಿಂಹನನ್ನು ವಾಹನವನ್ನು ಮಾಡಿಕೊಂಡಳು, ದೇವಿ! ಇದರಲ್ಲಿ ಏನುತೋರಿಸುತ್ತದೆ? ರಾಜಗ್ರಹದ ರಾಜಸ ಗುಣವನ್ನು ದಮನ ಮಾಡಿ ಸತ್ವಗುಣವು ನಿಂತಿತು! ಇದೇ ಸೂರ್ಯನನ್ನು ಚಕ್ರವನ್ನಾಗಿ ಶ್ರೀಹರಿಯು ಧಾರಣೆ ಮಾಡಿದನು.

## ರತ್ನಕಾರಕ

ಸ್ತ್ರೀಕಾರನಾದ ಶುಕ್ರನು ಈ ದೇವೀ. ಅವಳು ರವಿಯನ್ನು ಸಿಂಹವನ್ನು ವಾಹನವನ್ನಾಗಿಸಿದಳು. ಆದರೆ ಹೆಂಗಸು ರವಿಯನ್ನು ಚಕ್ರದಂತೆ ಧಾರಣೆ ಮಾಡಲಾರಳು. ಇವಳು ಈ ಲೋಕದವಳು, ಮನುಷ್ಯಳು. ಆದರೆ ಅದರ ಪ್ರತೀಕ ರತ್ನಗಳು. ರತ್ನಗಳನ್ನು ಧಾರಣೆ ಮಾಡಿದಳು. ನವರತ್ನಗಳಿಂದ ಇವಳಿಗೆ ಶೋಭೆ. ವಜ್ರ, ಶುಕ್ರನ ರತ್ನ. ಇದನ್ನು ಆಭರಣವಾಗಿ ಧಾರಣೆಮಾಡಿದಳು. ವಜ್ರ ವೈಡೂರ್ಯಾದಿ ನವರತ್ನಗಳು ಅವಳಿಗೆ ಪ್ರಿಯವಾದುವು.

ಶುಕ್ರನು ರತ್ನಪ್ರಿಯನು, ರತ್ನಕಾರಕನು. ವಜ್ರಕ್ಕೆ ವಿಶೇಷವಾಗಿ ಕಾರಕನು. ವಜ್ರಗಳಿಂದ ಯಾವ ಸ್ತ್ರೀ ವಶಳಾಗಳು? ವಜ್ರಕ್ಕಾಗಿ ಏನು ಬೇಕಾದರೂ ಮಾಡುತ್ತಾರೆ.

## ವಶೀಕರಣ ಶಕ್ತಿ

ವಶೀಕರಣ ಒಂದು ನಮೂನೆ ಸುಖದ ಸಾಧನೆ. ಈ ಕಾರಣ ಸುಖದ ಕಾರಕ ಶುಕ್ರನು ವಶೀಕರಣಕ್ಕೆ ಮೂಲ ಹೇತು. ವಶೀಕರಣ ಗ್ರಹವೂ ಇದೇ ಆಯಿತು. ವಶೀಕರಣಕ್ಕೆ ಸಾಧನೆಗಳಾದ ಸೌಂದರ್ಯ, ಸೌಂದರ್ಯ ಅಬಿವೃದ್ಧಿಕಾರಕ ಸಾಮಗ್ರಿಗಳೂ ಇವನ ಕಾರಕತ್ವದಲ್ಲಿ ಬಂದವು. ಸ್ನೋ, ಪೌಡರ್, ರಂಗುಗಳು, ವರ್ಣರಂಜಿತ ಉಡುಪುಗಳು ಇತ್ಯಾದಿ ಸೌಂದರ್ಯ ಅಭಿವೃದ್ಧಿಕಾರಗಳು.

ಸುಖವನ್ನು ಅನುಭವಿಸಲುಸ್ತ್ರೀಯು ಅವಶ್ಯಕ. ಇದರಲ್ಲಿ ಇರುವುದೇ ಈ ವಿಶೇಷ. ರಾಜನು ಶೂರನು, ಧೀರನು. ಯುದ್ಧ ಮಾಡಿ ರಾಜ್ಯಗಳನ್ನು ಗೆದ್ದಾನು. ಆದರೆ ಏನು ಮಾಡುತ್ತಾನೇ? ಅನರ್ಘ್ಯ ರತ್ನ ವಸ್ತುಗಳನ್ನು ತಂದಾನು. ತನ್ನ ರಾಣಿಗೆ ಕೊಡಬೇಕು. ಅವಳೊಂದಿಗೆ ತನ್ನ ಪರಾಕ್ರಮವನ್ನು ಕೊಚ್ಚಬೇಕು. ಆಗ ಅವನಿಗೆ ಸುಖ, ಆನಂದ. ಆದ್ದರಿಂದ ಸ್ತ್ರೀಯಿಲ್ಲದೆ ಸುಖವೆಲ್ಲಿ? ಸ್ತ್ರೀಯು ಆಸೆಗಳ ಗಣಿ. ಅವಳ ಆಸೆಗೆ ಮಿತಿಯಿಲ್ಲ. ಈ ಆಸೆಗಳನ್ನು ಪೂರೈಸಲಾರದೆ ಎಷ್ಟೋ ನರ,ರಾಕ್ಷಸ,ದೇವತೆಗಳು ಪರಾಭವವನ್ನು ಹೊಂದಿದರು. ಸ್ತ್ರೀಯ ಒಂದು ಪ್ರೇಮ ದೃಷ್ಟಿ ಅಥವಾ ಒಂದು ನಗೆಗಾಗಿ ಎಷ್ಟೋ ಕೇಡುಗಳನ್ನು ಮಾಡಿದರು ಈ ಗಂಡು ಧೀರರು, ಸುಖದ ಸಾಧನೆ ಈ ಸ್ತ್ರೀ. ಈ ಸ್ತ್ರೀಯೇ ಶುಕ್ರನು.

ಶುಕ್ರನು ಸುಖಕಾರಕನು. ಸುಖ ಕೊಡುವ ಸಖಿ, ಸ್ತ್ರೀ. ಈ ಸ್ತ್ರೀಯರಿಗೆ ಅತಿಪ್ರಿಯವಾದ ಸಮಸ್ತ ವಿಷಯಗಳೂ ಇದೇ ಕಾರಕತ್ವದಲ್ಲಿ ಬರುವುವು.

ಸಿಲ್ಕು ಬಟ್ಟೆಗಳು, ಸೀರೆಗಳು, ಹೂವುಗಳು, ಚಿತ್ರವಿಚಿತ್ರ ಆಭರಣಗಳು,

ಅಲಂಕಾರ ವಸ್ತುಗಳು. ಇವು ಸ್ತ್ರೀಯರಿಗೆ ಅತ್ಯಂತ ಪ್ರಿಯ. ಶುಕ್ರನು ಇವುಗಳಿಗೆ ಕಾರಕನು. ಮೆತ್ತನೆಯ ಹಾಸಿಗೆ, ಸುಪತ್ತಿಗೆ, ಮಂಚ, ಮೃದುವಾದ ಸಂಗೀತ, ಮತ್ತು ಗಾಯನ ವಾದ್ಯಗಳು. ಇವುಗಳು ರತಿಸುಖ ಸಾಮಗ್ರಿಗಳು. ಇವುಗಳಿಗೂ ಶುಕ್ರನೇ ಕಾರಕನು.

ವಾಹನಗಳು, ವಾಹನಕ್ಕೆ ಬೇಕಾದ ಸಾಮಗ್ರಿಗಳು, ಇದಕ್ಕೂ ಶುಕ್ರನೇ ಕಾರಕನು.

## ಗೃಹಲಕ್ಷ್ಮಿ

ಈ ಗ್ರಹಕ್ಕೆ ಅಭಿಮಾನಿ ದೇವತೆ ಲಕ್ಷ್ಮೀದೇವಿ. ಶಚಿಯೂ ಇದರ ದೇವತೆ ಎನ್ನುತ್ತಾರೆ.

ಲಕ್ಷ್ಮೀ ಕಟಾಕ್ಷ ಈ ಗ್ರಹದ ದೆಸೆಯಿಂದ ಬರುವುದು. ವಿವಾಹಾದಿ ಸನ್ಮಂಗಳ ಕಾರ್ಯಗಳು ಈ ಗ್ರಹದಿಂದಲೇ ಸರಿ. ಶುಕ್ರಗ್ರಹದ ಯೋಗ ನಡೆಯುವಾಗ ಎಲ್ಲರೂ ವಶವಾಗುತ್ತಾರೆ. ಇದು ಸರ್ವ ಜನರನ್ನು ವಶಮಾಡಿಕೊಳ್ಳುವ ಯೋಗ.

ಕೈ ಹಿಡಿದು, ಒಲಿದು ಬಂದ ಮಹಾಲಕ್ಷ್ಮಿ. ಅವಳೇ ಗೃಹಲಕ್ಷ್ಮಿ ಹೆಂಡತಿಯು. ಇವಳನ್ನು ಈ ಗ್ರಹವು ತೋರಿಸುತ್ತದೆ. ಶುಕ್ರನು ಮೇಷಾದಿ ಎಷ್ಟನೇ ರಾಶಿಯಲ್ಲಿರುವನೋ ಅಷ್ಟನೇ ಧಶಕ ವರುಷದಲ್ಲಿ ಮನುಷ್ಯರಿಗೆ ವಿವಾಹಯೋಗವು.

## ಶುಕ್ರನಿಗೆ ಯೋಗ ಹೇಗೆ?

ಈ ಶುಕ್ರನಿಗೆ ಶನಿಯ ಸಂಬಂಧ ಇರಬಾರದು. ಆಗ ಇವನು ಸಮಸ್ತ ವಿಷಯಗಳಲ್ಲಿಯೂ ಅನುಕೂಲ ಮಾಡಿಕೊಡುತ್ತಾನೆ.

ಶುಕ್ರನಿಗೆ ಸಂಬಂಧಪಟ್ಟ ರಾಶಿಗಳಲ್ಲಿ ಶನಿ ಇರಕೂಡದು. ಶುಕ್ರನಿಗೆ ಐದು, ಒಂಭತ್ತು, ಏಳು, ಹನ್ನೊಂದು, ನಾಲ್ಕು ಈ ರಾಶಿಗಳಲ್ಲಿ ಶನಿ ಇರಬಾರದು. ಶನಿಯ ದೃಷ್ಟಿಯಲ್ಲಾಗಲಿ, ಸಂಗಡವಾಗಲೀ ಶುಕ್ರನು ಇರಬಾರದು.

ಶನಿಯು ಶುಕ್ರನಿಗೆ ಎಂಟನೆಯ ಮನೆಯಲ್ಲಿದ್ದರೆ ಶುಕ್ರನು ಅತ್ಯಂತ ಶುಭನು. ಕಾರಣ, ಶನಿಗೆ ಶತೃಸ್ಥಾನದಲ್ಲಿ ಶುಕ್ರ. ಶುಕ್ರನಿಗೆ ಹಿಂದಿನ ರಾಶಿಯಲ್ಲಿ ಶನಿ ಇದ್ದರೆ ಶುಕ್ರನಿಗೆ ತುಂಬಾ ಬಲ. ಮೊದಲು ಕಷ್ಟ ಅನಂತರ ಬಹಳ ಸುಖ. ಶುಕ್ರನು ಉಚ್ಚಸ್ಥಾನದ ಮೀನರಾಶಿಯಲ್ಲಿದ್ದು ಶನಿಯು ತುಲಾ ರಾಶಿಯಲ್ಲಿದ್ದರೆ ಶುಕ್ರನು ಯೋಗಿಸುವನು. ವಿವಾಹದಿಂಲೂ ಕೈಹಿಡಿದ ಹೆಂಡತಿಯ ಅದೃಷ್ಟದಿಂದಲೂ ಇವನಿಗೆ ಅತ್ಯಂತ ಶುಭಕರ ಯೋಗವು. ಅನ್ಯ ಸ್ತ್ರೀ ಚಿಂತೆ ಇವನಿಗೆ ಇರಲಾರದು. ಆದರೆ ಇವನಿಗೆ ಶನಿದೆಶಾ ಶನಿಭುಕ್ತಿ ಬರಕೂಡದು. ಶನಿಯು ಅತ್ಯಂತ ಕೆಟ್ಟವನು. ಆ ಶನಿ ಭುಕ್ತಿಯಲ್ಲಿ ಸಾವು ಆದೀತು.

ಶುಕ್ರನು ರವಿ ಅಥವಾ ಗುರು ಸಂಬಂಧದಲ್ಲಿ. ಆಗ ಶನಿಯ ಯೋಗಕ್ಕೆ ಈ ಗ್ರಹಗಳು ಅಡ್ಡ. ಆಗ ಶುಕ್ರನು ಬಲವಾಗಿ ಯೋಗಿಸಲು ಸಹಾಯವಾಗುವುದು. ಬುಧ ಸಂಬಂಧದಲ್ಲಿ ಮಾತ್ರವೈರವನ್ನು ತೋರಿಸುವನು. ಅನ್ಯ ಸ್ತ್ರೀ ಸಂಬಂಧವನ್ನೂ ತೋರಿಸುವನು. ಇದು ಅವಯೋಗವು.

## ಶುಕ್ರ ಶನಿ ಯೋಗ

ಶುಕ್ರ, ಶನಿ, ಒಬ್ಬರು ಮತ್ತೊಬ್ಬರ ರಾಶಿಯಲ್ಲಿರುವುದು ಪರಿವರ್ತನವು. ಶುಕ್ರ ಶನಿ ಒಟ್ಟಿಗೆ ಇರುವುದು ಸಂಯೋಗವು. ಈ ಎರಡೂ ಶುಕ್ರನ ಯೋಗವನ್ನು ಕೆಡಿಸುವುವು.

ಮದುವೆಯಾಗುವ ವಯಸ್ಸಿನಲ್ಲಿ ಮದುವೆಯಾಗದೆ ಒದ್ದಾಡುವುದು. ಪ್ರೀತಿಸಿದ ಹೆಣ್ಣು ಅನ್ಯರ ಪಾಲಾಗುವುದು. ಮದುವೆಗೆ ಮುನ್ನ ಮತ್ತೊಬ್ಬ ಸ್ತ್ರೀ ಸಂಬಂಧ ಆಗುವುದು. ಕೈಹಿಡಿದ ಹೆಂಡತಿ ರೋಗದಿಂದ ನರಳಾಡುವುದು. ಮದುವೆ ಅನಂತರ ಭಿನ್ನಾಭಿಪ್ರಾಯದಿಂದ ಸ್ತ್ರೀಯನ್ನು ತ್ಯಾಗಮಾಡುವುದು. ಅನ್ಯಸ್ತ್ರೀ ಸಂಬಂಧದಿಂದ ಸ್ತ್ರೀ ರೋಗಗಳು ಬಂದು ನರಳುವುದು. ಇವು ಶನಿಯಿಂದ ಬಂದ ಬಳುವಳಿ. ಶನಿ ನೀಚ ಜಾತಿ. ಇದರಿಂದ ನೀಚ ಜಾತಿಯ ಸ್ತ್ರೀ ಸಂಬಂಧ. ಆದರಿಂದ ಅಪವಾದ, ಕಷ್ಟನಷ್ಟಗಳು. ಇದು ಪ್ರಾರಬ್ಧ.

ಅರ್ಥವಾಗದ ಪೀಡೆ. ಇವರಿಗೆ ಸುಖ ಎನ್ನುವುದು ಕನಸಿನಲ್ಲಿಯೂ ಇರದು. ಕಷ್ಟ ಪ್ರಿಯರು. ಪರಹಿತ ಚಿಂತನೆ ಮಾಡುವವರು. ಸುಖ ಸಿಗದೆ ವಿರಕ್ತರು. ದೇವತಾರ್ಚನೆ, ವೈರಾಗ್ಯ ವೇದಾಂತ, ನಿಷ್ಠೆ, ಬಹ್ಮಜ್ಞಾನ ಲಾಭ, ಗುರು ಅನುಗ್ರಹ, ಸುಖಾಲಂಕಾರ ತ್ಯಾಗ ಈ ಗುಣಗಳೂ ಇವರಿಗೆ ಸಹಜ. ಇವರಿಗೆ ಕಷ್ಟ. ಆದರೆ ಎಲ್ಲರಿಗೂ ಸುಖ. ಬಡವರಲ್ಲಿ ಪ್ರೀತಿ. ಶೂದ್ರರಲ್ಲಿ, ಕೆಲಸಗಾರರಲ್ಲಿ ಪ್ರೇಮ. ಇವು ಸುಗುಣಗಳು. ಶಾಂತಿ ಪಾಲಕರು, ವಿವೇಕಿಗಳು.

ರೇಷ್ಮೆ, ಅಮೃತ ಹೂವು ವಾಹನಾದಿಗಳ ತಯಾರಿಕೆ ಇವರ ಜೀವನ.

ಶುಕ್ರನ ಯೋಗ ಧನಯೋಗ. ಈ ನೀತಿ ವಿಧೇಯಕ ಅಲ್ಲ. ಶುಕ್ರನಿಗೆ ಶತ್ರುವಾದ ಗುರುವು ಧನ ಕೊಡಲಾರನು. ಆದರೆ ಇರುವ ಧನವನ್ನು ಹಾಳುಮಾಡಿಕೊಂಡು ಹಾಯಾಗಿ ಇರಬಹುದು.

ಶುಕ್ರನಿಗೆ ಗುರು ಸಂಬಂಧ ಅಗತ್ಯ. ಶುಕ್ರನು ಗುರುವಿನ ಯೋಗದಲ್ಲಿ ಬರದಿದ್ದರೆ ಮಕ್ಕಳಿಲ್ಲದೆ ಬಂಜೆಯಾಗುವಳು. ದೇವತಾ ಕಾರ್ಯಗಳಲ್ಲಿ ವರ್ಜ್ಯಳು. ಮಕ್ಕಳಾದರೆ ಸ್ತನಗಳಲ್ಲಿ ಅಮೃತ ಉತ್ಪತ್ತಿ. ಇಲ್ಲ, ಇಲ್ಲ. ಇದರಿಂದ ಅಮೃತ ತತ್ವವಿಲ್ಲ. ಆದ್ದರಿಂದ ಅಶುಭಳು. ಈ ಕಾರಣ ಶುಕ್ರನಿಗೆ ಗುರುವಿನ ಮನೆಯಲ್ಲಿ ಉಚ್ಚತ್ವ.

---

# 22

## ಗುರು ಅಂಶದ ಶುಕ್ರ

ಗುರು ಅಂಶದಲ್ಲಿ ಶುಕ್ರ. ಶುಕ್ರನಿಗೆ ಶನಿಯೋಗ ಇದ್ದೀತು. ಆದರೆ ಗುರುವು ಶನಿಯ ಕರ್ಮವನ್ನು ಇಲ್ಲಿ ಗ್ರಹಣ ಮಾಡುತ್ತಾನೆ. ಆಗ ಶುಕ್ರನು ಶುದ್ಧ ಆಗುತ್ತಾನೆ. ಈ ಗುರು ಶನಿಯೋಗ ಶುಭವಿದೆ. ಹೆಂಡತಿಯಲ್ಲಿ ದೇವತಾ ಶ್ರದ್ಧೆ, ದಾನ, ದಯಾ, ಧರ್ಮ, ಮಕ್ಕಳ ಸೇವೆ, ಮೌನ ಅಲ್ಪ ಕಾಮಾದಿ ಸುಗುಣಗಳು ಬಿಡಾರ ಮಾಡುವುವು.

ಗುರುವಿಗೆ ಶನಿಯ ಸಂಬಂಧವಿಲ್ಲ. ಶುಕ್ರನಿಗೂ ಶನಿಯ ಸಂಬಂಧವಿಲ್ಲ. ಆಗ ಶ್ರೀ ಹರಿಯ ಕೈ ಲಕ್ಷಣವಾದ 'ಶಂಖಯೋಗ'ವೆಂದರು. ಈ ಗುರು ಶಬ್ದಮಾಡುವ ಸಂಖ. ಶತ್ರು ಹೃದಯವನ್ನು ತಲ್ಲಣಿಸುವ ಪಾಂಚಜನ್ಯ.

### ಶುಕ್ರ ಕುಜ ಯೋಗ

ಫಲದಲ್ಲಿ ಇದು ಮಿಶ್ರಯೋಗವು. ಕುಜನು ಶನಿಯ ಕರ್ಮವನ್ನು ಎಳೆದುಕೊಂಡು ಕೈಹಿಡಿದ ಗಂಡನಿಗೆ ವಿಶೇಷ ಅರಿಷ್ಟವು. ಪರದೇಶ ವಾಸ, ಪರಾನ್ನ ಭೋಜನ, ಯಂತ್ರಾಲಗಳಲ್ಲಿ ಶೂದ್ರರೊಡನೆ ಜೀವನ ಇತ್ಯಾದಿ. ಸ್ತ್ರೀಯು ವಿಲಾಸಿಯು. ಗಂಡನ ಪೌರುಷಕ್ಕೆ ಒಂದು ಸವಾಲು. ಆದರೂ, ತೃಪ್ತಿಯಾಗದೆ ಗುಪ್ತವಾಗಿ ಪರಪುರುಷನ ಸಂಗಾಪೇಕ್ಷೆ ಬೇರೆ. ಇದು ಗಂಡನಿಗೆ ದರಿದ್ರ ಯೋಗವು.

ಆದರೆ ಕುಜನು ಶನಿಗೆ ಷಷ್ಠಾಷ್ಟಕಗಳಲ್ಲಿದ್ದಾನೆ. ಈ ಯೋಗವು ಮಹಾಭಾಗ್ಯವನ್ನು ತಂದುಕೊಡುವುದು. ಇಚ್ಛಿಸಿದ ಪುರುಷನಲ್ಲಿ ವಿವಾಹವಾಗಿ ಶಕ್ತಿ ಸಾಮರ್ಥ್ಯಗಳನ್ನು ಅಭಿವೃದ್ಧಿಮಾಡಿ ಧನಕನಕ ವಸ್ತು ವಾಹನಾದಿಗಳ ಸಂಪತ್ತು ಅಬಿವೃದ್ಧಿಯಾಗುವುದು.

ವಕ್ರೀ ಶನಿಯು ಕುಜನಿಗೆ ಶುಭಯೋಗ ತರುತ್ತೆ. ಆಗ ಅನ್ನ ದಾನಾದಿ ಧರ್ಮಗಳಲ್ಲಿಯೂ, ಲೋಕೋಪಕಾರದಲ್ಲಿ ನಿರತಳು. ಇವಳು ಪತಿವ್ರತೆ. ಅವಳಿಗೆ ಗಂಡನದೇ ಧ್ಯಾನ. ಅವನ ಶ್ರೇಯೋಭಿವೃದ್ಧಿ ಇವಳ ಬಯಕೆ. ಮೊದ ಮೊದಲು ವಿವಾಹದಲ್ಲಿ ವಿಘ್ನಗಳು ವಯಸ್ಸು ಕಳೆದ ನಂತರ ವಿವಾಹ ಆದೀತು.

ಇಲ್ಲಿ ಕುಜನೇ ಮಹಾವಿಷ್ಣುವಿನ ಗದೆ.

## ಶುಕ್ರ–ಬುಧ ಸಂಗ

ಇದು ಸರ್ವತ್ರ ಶುಭದಾಯಕ ಕಮಲಯೋಗವು. ಹೆಂಡತಿಯು ಕಲಾವತಿ, ಕುಶಲ ಬುದ್ಧಿ ಪ್ರೇಮ ಆದರಗಳ ತವರುಮನೆ. ಕೆಲಸ ಶುಚಿ. ಬಂದು ವರ್ಗ ಅವಳನ್ನು ಪ್ರೇಮದಿಂದ ನೋಡುವುದು.

ಬುಧನಿಗೆ ಶನಿಯೋಗ. ಆಗ ಇವಳ ಪ್ರೇಮ ಬಂಧುಗಳಿಂದ ಅಪವಾದ ತರುತ್ತೆ. ಇಲ್ಲಿ ಬುಧನಿಗೆ ಗುರು ಸಂಬಂಧ. ಇದು ಮಹಾಲಕ್ಷ್ಮೀ ಯೋಗವು. ಈ ಪತ್ನೀ ಯೋಗದಿಂದ ಸರ್ವಶಾಸ್ತ್ರಗಳ ಜ್ಞಾನವು ಪ್ರಾಪ್ತಿ ಆದೀತು. ಸಕಲ ಭಾಗ್ಯಗಳೂ ಪ್ರಾಪ್ತಿಯಾಗಿ ಮನಃಪೂರ್ವಕ ಪ್ರೇಮದಿಂದ ಬಾಳುವ ಸಖಿ ಆಗುವಳು.

ಉಳಿದ ಗ್ರಹಗಳು ಶುಕ್ರನಿಗೆ ರಕ್ಷಣೆ ಕೊಡಲಾರವು. ಅವುಗಳಿಂದ ಆಯಾ ಗ್ರಹದ ಆರಿಷ್ಟ ಆದೀತು.

## ಕಷ್ಟ ನಿವಾರಣೆಗೆ ಉಪಾಯಗಳು

ಶುಕ್ರನು ಶುಭನು. ಶುಭಕಾರ್ಯಗಳೆಲ್ಲದಕ್ಕೂ ಅಧಿಪತಿ. ವಿವಾಹ

ಕಾರ್ಯಗಳಲ್ಲಿ ಇನ್ನೂ ವಿಶೇಷ. ಶನಿ ಸಂಬಂಧದಿಂದ ಅವನಿಗೆ ಕಷ್ಟ. ಅದಕ್ಕಾಗಿ ಪೂರ್ವಿಕರು ನಿಯಮಗಳನ್ನು ಮಾಡಿದರು.

ವಿವಾಹವಾಗುವ ಮುನ್ನ ನವಗ್ರಹ ಆರಾಧನೆ ಮಾಡುತ್ತಾರೆ. ಇದರಿಂದ ಸೂರ್ಯನ ದೋಷವೇನಾದರೂ ಸಂಭವಿಸಿದರೆ ಶಾಂತಿಯಾಗುವುದು. ಗುರು ಪ್ರಸಾದಕ್ಕಾಗಿ ಕುಲದೇವರನ್ನು ಪೂಜೆ ಮಾಡುತ್ತಾರೆ. 'ದೇವರ ಸಮಾರಾಧನೆ' ಎಂದು ಮಾಡಿ ಬಳಗದವರನ್ನು ಕರೆದು ಅನ್ನದಾನ ಮಾಡುತ್ತಾರೆ.

ಇದರಲ್ಲಿ ರವಿ, ಗುರು, ಕುಜ ಈ ಮೂವರ ದೋಷಗಳಿಗೂ ಶಾಂತಿಯನ್ನು ಮಾಡಿದಂತಾಯಿತು.

ಶುಕ್ರ ಅಂದರೆ ಹೆಣ್ಣು. ಕುಜ ಅಂದರೆ ಗಂಡು. ಇವರಿಬ್ಬರೂ ಸೇರಿದರೆ ಶುಕ್ರ ಕುಜ ಯೋಗ ಅಥವಾ, ವಿವಾಹ ಅಂದರು.

ಆದುದರಿಂದ ಕಜನ ದೋಷ ಯಾವುದೂ ಫಲ ಕೊಡಲಾರದು. ಗಂಡನಿಗೆ ಗುರು ದೋಷ ಹೋಗುವುದಕ್ಕಾಗಿ 'ಕಾಶಿ ಯಾತ್ರೆ' ಅಂತ ಮಾಡಿಸಿ 'ಗಂಗಾಸ್ನಾನ' ಮಾಡಿಸುತ್ತಾರೆ. ಯಾತ್ರೆಯಿಂದ ಬಂದ ಆ ಗಂಡನ್ನು ಎದುರುಗೊಂಡು ಹೆಣ್ಣಿನ ತಂದೆಯು ಆಸನ, ಪಾದ್ಯ, ಅರ್ಘ್ಯ ಇತ್ಯಾದಿ ಶೋಡಶ ಉಪಚಾರಗಳಿಂದ ಪೂಜೆ ಮಾಡುತ್ತಾರೆ. ಆ ಕುಜ ಅಂತರೆ ಗಂಡಿನ ಕಾಲು ತೊಳೆದು ಪಾದೋದಕವನ್ನು ತಲೆಯ ಮೇಲೆ ಹಾಕಿಕೊಳ್ಳುತ್ತಾರೆ. ಇದರಿಂದ ಕುಜದೋಷವು ನಿವೃತ್ತಿ ಹೊಂದುವುದು.

ಹೆಣ್ಣೂ ಅಷ್ಟೆ. ಗಂಡನನ್ನು ನೋಡುವ ಮೊದಲು ಗೌರಿಯನ್ನು ಪೂಜಿಸುತ್ತಾಳೆ. ಗೌರಿಗೆ ಮಾಂಗಲ್ಯ (ಮಂಗಳನಿಂದ ಮಾಂಗಲ್ಯ) ಧಾರಣೆ ಮಾಡಿ ಪೂಜಿಸುತ್ತಾಳೆ. ಗಂಡನ ಕೈಯಿಂದ ಆ ಮಾಂಗಲ್ಯವನ್ನು ಕಟ್ಟಿಸಿಕೊಳ್ಳುತ್ತಾಳೆ. ಇದಕ್ಕೆ ಮೊದಲು 'ವರಪೂಜೆ' ಎಂದು ಗಂಡನ್ನು ಬಟ್ಟೆ ಬರೆ ಪಾರಿತೋಷಕ ಇದೆಲ್ಲವನ್ನೂ ಕೊಟ್ಟು ಪೂಜೆ ಮಾಡುತ್ತಾರೆ.

ಅನಂತರ ತಂದೆಯು ತನ್ನ ಮಗಳನ್ನು ದಾನ ಮಾಡುತ್ತಾನೆ. ಇದಕ್ಕೆ 'ಕನ್ಯಾದಾನ' ಅಂದರು. ಧಾರೆ ಎರೆದು ಕೊಡುವುದರಿಂದ 'ಧಾರೆ ಮುಹೂರ್ತ' ಅಂದರು.

ಆಗ ಗಂಡು ಮಾವನಿಗೆ ವಾಗ್ದಾನ ಮಾಡುತ್ತಾನೆ. ಇದೇ 'ಲಾಲನೆ ಪಾಲನೆ' ಮಂತ್ರ. ದಾನವಾಗಿ ಪಡೆದ ಹೆಂಡತಿಯನ್ನು ಸುಖದಿಂದ ಸಾಕುವೆನೆಂದು ವಾಗ್ದಾನ ಮಾಡುತ್ತಾನೆ.

ಅನಂತರ ಕರ್ಮಾಕರ್ಮ ಫಲಗಳನ್ನು ಸಮನಾಗಿ ಭೋಜನ ಮಾಡಬೇಕೆಂದು ಒಂದೇ ಎಲೆಯಲ್ಲಿ ಇಬ್ಬರಿಗೂ ಊಟಮಾಡಿಸುತ್ತಾರೆ. 'ಭೂಮದ ಊಟ' ಅಂದರು.

ಸರ್ವತ್ರ ಗಂಡಿನ ಕಡೆಯವರನ್ನು ಪೂಜೆಮಾಡುತ್ತ ಅವರಿಗೆ ಉಪಚಾರಾಧಿಗಳಲ್ಲಿ ಲೋಪವಿಲ್ಲದಂತೆ ನೋಡಿಕೊಂಡು ಮನಸ್ಸನ್ನು ಸಂತೋಷಪಡಿಸುತ್ತಾರೆ.

ಅವರ ಮನೆಗೆ ಹೆಣ್ಣನ್ನು ಕರೆದುಕೊಂಡು ಹೋಗಿ ಬಿಡುತ್ತಾರೆ. ಇದಕ್ಕೆ 'ಗೃಹಪ್ರವೇಶ' ಅಂದರು.

ಈ ರೀತಿಯಾಗಿ ಶುಕ್ರಗ್ರಹಕ್ಕೆ ಯಾವ ದೋಷವೂ ತಟ್ಟದಂತೆ ಎಲ್ಲಾ ಬಗೆಯ ಶಾಂತಿಗಳನ್ನು ಮಾಡಿ ಕೆಲಸ ಮುಗಿಸುತ್ತಾರೆ.

ಕೊನೆಯಲ್ಲಿ ಸುಮಂಗಲಿಯರಿಗೆ ದಂಪತಿಗಳ ಕೈಯಲ್ಲಿ ಪೂಜೆ ಮಾಡಿಸುತ್ತಾರೆ. ಇದು ಶುಕ್ರನಿಗೆ ಶಾಂತಿಯು.

ಕುಜನು ದೋಷ ಬಲವಿದ್ದರೆ ಆಗ ಯಂತ್ರಗಳನ್ನೂ ವಾಹನಗಳನ್ನೂ ಸಾಲದಿದ್ದಲ್ಲಿ ವರದಕ್ಷಿಣೆಯನ್ನು ಕೊಟ್ಟು ಸಂತೋಷಪಡಿಸುತ್ತಾರೆ.

ಇದರಿಂದ ವಧುವಿಗೆ ಗಂಡನ ಜೊತೆ ಸುಖವಾದ ಸಹ ಬಾಳ್ವೆ ಸಿಕ್ಕುವುದು. ಇದಕ್ಕಾಗಿ ಪ್ರಾರ್ಥನೆ ಮಾಡುತ್ತಾರೆ.

## ಶುಕ್ರಾರಿಷ್ಟ ಫಲ

ಹೆಂಡತಿಯನ್ನು ತೋರಿಸುವ ಶುಕ್ರನು ಅನಿಷ್ಟ ಸಂಬಂಧದಿಂದ ಅವಯೋಗವನ್ನು ಕೊಟ್ಟರೆ ಅದು ಹನ್ನೆರಡು ವರುಷಕಾಲವಿರುವುದು. ಅನಂತರ ಹೆಂಡತಿ ಸಾಯುವಳು. ಇಲ್ಲವೇ ಗಂಡು ಬೇರೆ ಮದುವೆಯಾಗುವನು, ಇಲ್ಲದಿದ್ದಲ್ಲಿ ಪುನಃ ಸಂಸಾರ ಚಕ್ರವು ಸುಗಮವಾಗಿ ನಡೆಯುವುದು.

## 'ಸ್ತ್ರೀ ಶಾಪ' ಎಂದರೇನು?

ಸ್ತ್ರೀಯರನ್ನು ಕೀಳುಭಾವನೆಯಲ್ಲಿ ನೋಡುವುದು. ಕೈಹಿಡಿದವಳನ್ನು ಸೇವಕಿಗಿಂತ ಕಡೆಯಾಗಿ ಭಾವಿಸುವುದು. ಅವಳ ಎದುರಿನಲ್ಲಿಯೇ ಮತ್ತೊಬ್ಬಳನ್ನು ಅನುಭವಿಸುವುದು, ಅವಳು ಕೋರಿದಾಗ ಸುಖಕೊಡದೆ ಕಾಡುವುದು, ತಾನು ಸುಖಲೋಲನಾಗಿ ಅವಳಿಗೆ ಕೇವಲ ಕಷ್ಟವನ್ನೇ ಕೊಡುವುದು, ಎಲ್ಲರೆದುರಿಗೆ ಹೆಂಡತಿಯನ್ನು ಹಳಿಯುವುದು.

ಯಾವುದೇ ಗಂಡಸು ತನ್ನ ಹೆಂಡತಿಯನ್ನು ಈ ರೀತಿ ಗೋಳುಗುಟ್ಟಿಸಿದರೆ 'ಸ್ತ್ರೀ ಶಾಪ' ಬರುವುದು. ಆಗ ಅವನ ಜಾತಕದಲ್ಲಿ ಶುಕ್ರನು ಶನಿಯೋಗದಲ್ಲಿ ಅಥವಾ ನೀಚ ಸಂಬಂಧದಲ್ಲಿರುತ್ತಾನೆಂದು ಅರ್ಥ.

ಇಂತಹವರ ಜೀವನದಲ್ಲಿ ಸುಖವಿರುವುದಿಲ್ಲ. ಎರಡನೆಯದು ಹೆಂಡತಿಯನ್ನು ಸೂಳೆಯಂತೆ ಭಾವಿಸುವ ಜನರೂ ಇರುವರು!! ಸೂಳೆಯರನ್ನು ಹೆಂಡಿರಂತೆ ಭಾವಿಸುವ ಅವಿವೇಕಿಗಳು ಇವರೇ!

ಹೆಂಡತಿ ಅಂದರೆ ಮದುವೆಯಾಗಿ ಗಂಡನಿಗೆ ಸುಖ ಕೊಡುವವಳು. ಇವಳಿಗೆ ಕಾರಕನು ಶುಕ್ರನು. ತಾನು ಪ್ರೀತಿ ಮಾಡುವ ಹೆಂಗಸು, ಶುಕ್ರನು. ಈ ಇಬ್ಬರನ್ನೂ ತೋರಿಸುವನು. ಇಲ್ಲಿ ಅವನಿಗೆ ಕೇಡಾದರೆ ಈ ಇಬ್ಬರು ಹೆಣ್ಣುಗಳೂ ಒಬ್ಬಳೇ ಆಗಳು. ಬೇರೆ ಬೇರೆ ತೋರಿಸುತ್ತೆ. ಪ್ರೀತಿ ಮಾಡುವ ಹೆಂಗಸನ್ನು ಶುಕ್ರನೂ ಅವನ ಮುಂದೆ ಇರುವ ಗ್ರಹವು ಹೆಂಡತಿಯನ್ನೂ ತೋರಿಸುವುದು.

## ಹೆಂಡಿತಿಯ ನೆಲೆ ತಿಳಿಯುವುದು ಹೇಗೆ?

ಶುಕ್ರನಿರುವ ರಾಶಿ ನವಾಂಶಕ್ಕೆ ಮೇಷಾದಿ ಎಣಿಸಿದರೆ ಪ್ರಭವಾದಿ

ಸಂವತ್ಸರದಿಂದ ಅಷ್ಟನೇ ವರುಷದಲ್ಲಿ ಜನನ. ನವಾಂಶಾಧಿಪತಿ ಇರುವ ರಾಶಿ ಮಾಸದಲ್ಲಿ ನವಾಂಶಾಧಿಪತಿಯ ಕಲೆಗನುಗುಣವಾದ ತಿಥಿಯಲ್ಲಿ ಜನನವು.

ಹೆಸರು ಶುಕ್ರನು ಸಂಗಡವಿರುವ ಗ್ರಹದ ಅಬಿಮಾನಿ ದೇವತೆಯ ಹೆಸರಗಳಲ್ಲಿ ಒಂದು. ಒಂಟಿಯಾಗಿದ್ದರೆ ಅವನ ನವಾಂಶಾಧಿಪತಿ ಅಬಿಮಾನಿ ದೇವತೆಯ ಹೆಸರುಗಳಲ್ಲಿ ಒಂದು.

ಶುಕ್ರನಿರುವ ನವಾಂಶಾಧಿಪತಿ ಯಾವ ಭಾವದಲ್ಲಿರುತ್ತಾನೆ? ಆ ಭಾವವು ಹೆಂಡತಿಯ ಜಾತಕದಲ್ಲಿ ಪ್ರಾಮುಖ್ಯ ಭಾವ. ನವಾಂಶಾಧಿಪತಿಯ ಕಾರಕನಾದ ಬಂಧುವು ವಿವಾಹ ಕರ್ತೃವು.

ಶುಕ್ರನಿರುವ ರಾಶಿ ಅಥವಾ ಅವನ ಏಳನೆಯ ರಾಶಿ ಅದರಲ್ಲಿಯ ಗ್ರಹಗಳ ಸ್ಥಿತಿಯಿಂದ ವಿವಾಹ ಕ್ಷೇತ್ರವನ್ನು ತಿಳಿಯಬಹುದು.

ಶುಕ್ರನ–ರಾಶಿ ನವಾಂಶಕ್ಕೆ ಅನುಗುಣವಾದ ವಯಸ್ಸು ವಿವಾಹಕಾಲದಲ್ಲಿ ವಧುವಿನ ವಯಸ್ಸು. ಮೇಷಾದಿ ತುಲಾದಿ ಚಕ್ರಗಳಲ್ಲಿ ಇದರ ಎಣಿಕೆ.

ಹೆಂಡತಿಯ ಜಾತಕದ ಗ್ರಹಗಳು ಗಂಡಿನ ಜಾತಕದ ಗ್ರಹಗಳಿಗೆ ತ್ರಿಕೋಣ ರಾಶಿಯಲ್ಲಿ ಇರುತ್ತವೆ. ಯಾವ ರೀತಿ ಅಭ್ಯಾಸ ಮಾಡಿದರೆ ಆ ರೀತಿ ವಿದ್ಯೆಯು ಸಿದ್ಧಿಯಾಗುವುದು.

ಶುಕ್ರನು ಸಮಸ್ತ ಸುಖ ಸಂಪತ್ತುಗಳಿಗೆ ಕಾರಕನು. ಇವನು ಶುಭನು. ಅಶುಭ ಸಂಬಂಧವಿಲ್ಲದಿದ್ದರೆ ಜಾತಕನು ಸುಖಿಯು. ಸುಖದಿಂದ ಜೀವನ ನಡೆಸುವನು. ಆನಂದವಾಗಿ ಕಾಲ ಕಳೆಯುವನು.

ಪರಮಾನಂದ ಗಾತ್ರಾಯ ರಮಾ ಆನಂದ ದಾಯಿನೇ
ನಂದ ಗೋಪ ಕುಮಾರಾಯ ಶಶ್ವತ್ ಕೈವಲ್ಯದಾಯಿನೇ॥

---

# 23

## ಶನಿಯಿಂದ ನಿಂದೆ

ಸಾಯಂಕಾಲ ಸ್ವಚ್ಛ ಬಟ್ಟೆ ಹಾಕಿಕೊಂಡು ಬಸ್ಸಿನಲಿ ಹೊರಟರು. ಪಕ್ಕದಲ್ಲಿಯೇ ಬಂದು ಕೂತ ಭೂಪ! ಯಂತ್ರಾಲಯದಿಂದ ಬರುತ್ತಿರಬಹುದು. ಎಣ್ಣೆ ತೊಯ್ದ ಬಟ್ಟೆ, ದುರ್ವಾಸನೆ, ತಲೆ, ಮುಕ, ಬಟ್ಟೆ ಎಲ್ಲವೂ ಅಷ್ಟೆ. ಒಂದು ಪೂರ್ತಿ ಬಾರು ಸೋಪೇ ಬೇಕು. ಬಟ್ಟೆ ಎಲ್ಲ ಕೆಟ್ಟಿತು. ಎಷ್ಟು ಬೇಜಾರು, ಎಷ್ಟು ಜಿಗುಪ್ಸೆ. 'ಥೂ' ಎಂದೀರಿ. ಬಸ್ಸಿಳಿದು ನೇರ ವಾಪಸ್ಸು ಮನೆಗೆ ಬಂದರು.

ಈ ರೀತಿ ಜುಗುಪ್ಸೆ ತಾತ್ಸಾರ ಯಾವುದಾದರ ಬಗ್ಗೆ ತೋರಿಸಿದರೆ ಆ ವಿಚಾರಕ್ಕೆ ಶನಿಯೇ ಕಾರಣನು.

ಆದುದರಿಂದ ಇವನನ್ನು 'ನಿಂದಾಕಾರಕ' ಎಂದರು.

ಆಕಾಶದಲ್ಲಿ ಗ್ರಹಗಳು ಸಂಚಾರಮಾಡುತ್ತವೆ. ಅತ್ಯಂತ ಕಡಿಮೆವೇಗದಲ್ಲಿ ಚಲಿಸುವುದು, ಈ ಗ್ರಹ ಮಾತ್ರ. ಆದುದರಿಂದ ಇವನನ್ನು "ಶನೈಃಚರತೀತಿ ಶನೈಶ್ಚರಃ" ಅಂದರು. ಎಲ್ಲದರಲ್ಲಿಯೂ ಮಂದಗತಿ. ಆದುದರಿಂದ ಇವನನ್ನು 'ನಿದಾನ ಕಾರಕ' ವಿಳಂಬಕಾರಕ ಎಂದರು.

ಚುರುಕು ಇಲ್ಲದ ಪ್ರಯುಕ್ತ 'ಮಂದ' ಅಂದರು. ಇದೇ ಸೋಮಾರಿತನ.

ಇದಕ್ಕೆ ' ಜಡತ್ವ ' ಅಂದರು. 'ಜಡತ್ವಕಾರಕ' ಶನಿ. 'ಜಡತ್ವದಿಂದ ಜಾಡ್ಯ' ಅಂದರು. ಈ ಜಡತ್ವವು ಕಾಯಿಲೆ ಎಂದೂ ಅರ್ಥವಾಗುವುದು. ಆದುದರಿಂದ ಇವನು ರೋಗಕಾರಕನೂ ಆದನು.

ಮಂದಗತಿಯುಳ್ಳವನಾಗಿ ನಿಂದೆಗೆ ನಿರ್ಲಕ್ಷ್ಯನಿರುತ್ತಾನೆ. ಇವನು ನಿಂದ್ಯ ಕೆಲಸಗಳನ್ನು ಎಷ್ಟು ಬೇಕಾದರೂ ಮಾಡಬಲ್ಲನು. ಸೇವೆಯನ್ನೂ ಮಾಡುವನು. ಆದುದರಿಂದ ಇವನು 'ಸೇವಾಕಾರಕನಾದನು'. ಹಿಂದಿನ ಕಾಲದಿಂದ ಸೇವೆ ಮಾಡುವುದು ಶೂದ್ರರು. 'ಶೂದ್ರಜಾತಿ'ಗೂ ಇವನೇ ಕಾರಕನು.

ದೇಹ ಶ್ರಮಪಟ್ಟು ಬೆವರು ನೀರು ಸುರಿಸಿ ದುಡಿಯುವವನು ಶನಿ ಭಾರ ಎಷ್ಟು ಬೇಕಾದುರೂ ಹೊರುತ್ತಾರೆ. ಆದುದರಿಂದ ಇವನು 'ದೇಹಶ್ರಮ' ಆಯಾಸಕಾರಕ'ನು.

ಶುಕ್ರಸಂಬಂದದಲ್ಲಿ ಇವನು 'ಆಶ್ರಮ'ವನ್ನು ತೋರಿಸುತ್ತಾನೆ.ವಿಶ್ರಾತಿ ಜಾಗಕೂ ಕಾರಕನಾದನು. ಸಂಸಾರದ ಭಾರವನ್ನು ಹೊರುವುದರಿಂದ ಹೆಂಡತಿಗೆ 'ಭಾರ್ಯಾ'ಎಂದರು.

ಪ್ರಿಯವಾದ ವಸ್ತು, ಘಟನೆ, ಜನ ಶುಕ್ರನದು, ಅಪ್ರಿಯವಾದುದು ಎಲ್ಲವೂ ಶನಿಯದು. ಜುಗುಪ್ಸೆ, ಅಸಹ್ಯ, ಅಸಹ್ಯ ವಸ್ತುಗಳಾದ ಗೊಬ್ಬರ, ಕಸ ಇತ್ಯಾದಿ ಎಲ್ಲಕ್ಕೂ ಇವನೇ ಕಾರಕನು. ಇದ್ದರಿಂದ ಇವನು ' ಮಲ ' ಕಾರಕನಾದನು. ಶುಕ್ರನು ಅಮಲ, ನಿರ್ಮಲ ಕರಕನು.

## ರೋಗ-ತ್ಯಾಗ-ಭಕ್ತಿ-ಶನಿಯಿಂದ

ಶನಿಯು ಸೋಮಾರಿತನ ಜಡತ್ವವನು. ಇದರ ಪರಮಾವಧಿ ' ನಿದ್ರೆ '. ಇದಕ್ಕೂ ಇವನೇ ಕಾರಕನು.

ದೀರ್ಘ ನಿದ್ರೆ ಅಥವಾ ಸಾವು, ಮೃತ್ಯು. ಇದಕ್ಕೂ ಇವನೇ ಕಾರಕನು. ಇದಕ್ಕೆ ಸಹಾಯಕವಾದ ರೋಗಗಳಿಗೂ ಅದನ್ನು ಅನುಭವಿಸುವ

ರೋಗಿಗಳಿಗೂ ಇವನೇ ಕರಕನು. ಆದುದರಿಂದ ಇವನನ್ನು ' ರೋಗ ಕಾರಕ' ಎಂದರು.

' ಬೇಡ ' ಎನ್ನುವುದ ಇವನ ಮಂತ್ರ. ಇದಕ್ಕೆ ತ್ಯಾಗ ಅಂದರು. ' ನಿವೃತ್ತಿ ಧರ್ಮ ' ಅಂದರು. ತ್ಯಾಗಕ್ಕೆ ಸನ್ಯಾಸ ಅಂದರು. ಇದು ವೇದಾಂತದಲ್ಲಿಯ ಶಬ್ದಗಳು. ಈ ತ್ಯಾಗ, ಸನ್ಯಾಸ, ನಿವೃತಿ, ಅಂತ ಇವುಗಳಿಗೂ ಶನಿಯೇ ಕಾರಕ. ತ್ಯಾಗಕಾರಕನು ' ತ್ಯಾಗಿ 'ಗೂ ಇವನೇ ಕಾರಕನು.

ತ್ಯಾಗಿಯ ಭಕ್ತನು. ಆದ್ದರಿಂದ ಇವನನ್ನು ವಿಷ್ಣುಭಕ್ತನೆಂದರು. ವಿಷ್ಣುಭಕ್ತಿ ಕಾರಕನು ಶನಿಯೇ ಹೌದು. ವಿಷ್ಣು ಭಕ್ತರಾದ ಆಂಜನೇಯ ಪ್ರಹ್ಲಾದ ಇವರಿಗೆಲ್ಲಾ ಇವನೇ ಕಾರಕನು.

### ಅಯಷ್ಯಕಾರಕೆ

ಮೃತ್ಯುವಿಗೆ ಕಾರಕನು. ಅಲ್ಲಿಯವರೆಗೆ ಇರುವ ' ಆಯುಷ್ಯ ' ಪ್ರಾಣ ವಾಯುವಿಗೂ ಇವನೇ ಕರಕನು.

ಮೃತ್ಯುವನ್ನಪ್ಪಿ ಸತ್ತ ಹೆಣಗಳಿಗೂ ಇವನೇ ಕಾರಕನು. ಈ ಪ್ರೇತಗಳನ್ನು ಸಂಸ್ಕಾರಮಾಡಿ ಮೋಕ್ಷ ಕೊಡಿಸುವರೆಂಬ ಪುರೋಹಿತರಿಗೂ ಇವನೇ ಕಾರಕನು. ಈ ಪ್ರೇತಗಳನ್ನು ಕೂಡಿಡುವ ಖಾನೆ ( DEATH WARD ) ಗಳಿಗೂ ಇವನೇ ಕಾರಕನು.

ಕಷ್ಟದಲ್ಲಿರುವ ಶೋಕವನ್ನು ಕೊಡುವುದಕ್ಕೂ ಇವನೇ ಕಾರಕನು. ದುಃಖ ಶೋಕ, ಕಷ್ಟ, ಪಶ್ಚಾತ್ತಾಪ ಇವೆಲ್ಲಕ್ಕೂ ಇವನೇ ಕಾರಕನು. ಶೋಕ ತಾಪಗಳಿಂದ ಅಂತರಾತ್ಮನನ್ನು ಶುದ್ಧಿ ಮಾಡುವನು. ಮಾಡಿದ ಪಾಪಗಳಿಗಾಗಿ ಗೋಳಾಡಿಸುವವನು. ಇವನು ಧರ್ಮವನ್ನು ಕಾಪಾಡುವ ' ಯಮನು '. ಯಮನೆಂದರೆ ಶಿಕ್ಷಕನೆಂದರ್ಥ.

ಯಮನ ವಾಹನವಾದ ಎಮ್ಮೆಯೂ ಇವನೇ. ನೀಲವರ್ಣ ಇವನ ಅಭಿಮಾನ ವರ್ಣ. ನಧಾನವಾಗಿ ಕುಂಟುತ್ತಾ ನಡೆಯುವುದು, ಯಮನ ನಡೆ.

ಕೊಳಕಿನ ಅಭಿಮಾನ ಯಾರಿಗಾದರೂ ಇದ್ದರೆ ಇವನೇ ಅವನು. ಸ್ನಾನ ಆಗದು ಇವನಿಗೆ.

ಯಾರಿಗೂ ಬೇಡದ ವಸ್ತು ಇವನು. ಸಂಕಟಪಡುವವರೂ ಅನಾಥ, ಅಶಕ್ತರಿಗೂ ಇವನೇ ಕಾರಕನು. ಅಶಕ್ತರನ್ನು ಕಾಪಾಡುವ ಅಶಕ್ತಪೋಷಕ ಸಭೆಗಳಿಗೂ ಇವನೇ ಕಾರಕನು.

ಇವನ ಭಯದಿಂದಲೇ ಎಲ್ಲರೂ ದಾನಧರ್ಮಾದಿಗಳನ್ನು ಮಾಡುತ್ತಾರೆ. ಇದರಿಂದಲೇ ಭೀಕ್ಷುಕರು ನಿರಾಯಾಸವಾಗಿ ಬದುಕುತ್ತಿದ್ದಾರೆ.

ಕಷ್ಟ, ಕಷ್ಟಪಡುವುದು, ಕೂಲಿಗಾರರು ಎಲ್ಲರನ್ನೂ ಇವನೇ ತೋರಿಸುತ್ತಾನೆ. ಇವನು ಬಲಿಷ್ಠನಾದರೆ ಕೂಲಗಾರರು ಕೊಬ್ಬಿ ಮತ್ತರಾಗುವರು.

ಕಷ್ಟಪಡುವವರು ದೇವರನ್ನು ಮೊರೆ ಹೊಗುತ್ತಾರೆ. ಅದ್ದರಿಂದ ಅವನಿಗೆ ' ಶೋಕನಾಶಕ ' ಅಂದರು. ' ಸಂಕಟ ಬಂದಾಗ ವೆಂಕಟರಮಣ ' ಅಂದರು.

ಶುಕ್ರನಿಗೆ ಕಾರಕತ್ವ ಅಮೃತ. ಅಮೃತಮಯನಾದ ಶ್ರೀಹರಿಯು ಈ ಶನಿಯನ್ನು ತಾನು ಎಳೆದು ಹಿಡಿದು ಅವನ ಗುಣಗಳನ್ನು ಅನುಕರಣ ಮಾಡಿದನು. ಆಗ ಶುಕ್ರ ಶನಿಯೋಗವು ಬಂದಿತು. ಆಗ ಶನಿಯ ಯೋಗದಲ್ಲಿರುವವನಿಗೆ ಶುಕ್ರನ ಯೋಗವು ಬರುವುದು. ಕಷ್ಟ ಹೋಗಿ ಸುಖ ಉಂಟಾಗುವುದು.

ಶನಿಯ ವರ್ಣ ನೀಲ. ಇವನ ಬಣ್ಣ ನೀಲ. ಶೂದ್ರನಂತೆ ದನ ಕಾದನು, ಗಾಡಿ ಹೊಡೆದನು. ಊಳಿಗದವನಂತೆ ಕರೆದಾಗ ಬಂದನು. ಯಮನಂತೆ ಶಿಕ್ಷಿಸಿದನು. ತಾಯಿಯಂತೆ ಪೋಷಿಸಿದನು.

## ಮೋಕ್ಷಕಾರಕ

' ಕೊಳೆ ' ಅಂದರು ಕರ್ಮ. ಆ ಕೊಳೆಯನ್ನು ತೊಳೆಯಲು ಇವನ ಪಾದೋದಕವೇ ನೀರಾಯಿತು. ಮನಸ್ಸನ್ನು ತೊಳೆದು ಶುದ್ಧಿ ಮಾಡಲು ಇವನ

ನಾಮೋಚ್ಚಾರವು ಸಾಧನೆಯಾಯಿತು. ದೇಹದ ಪಾಪವನ್ನು ತೊಳೆಯಲು ಇವನ ಪಾದ ಸೇವೆಯೇ ಗತಿಯಾಯಿತು.

ಸರ್ವಾಂಗಗಳಿಂದ ನಡೆಯುವ, ನಡೆದ, ನಡೆಯಬಹುದಾದ ಸಮಸ್ತ ಕರ್ಮಕಾರಕ ಪಾಪಗಳಿಗೂ ಇವನೇ ಔಷದ, ರಾಮಬಾಣ. ಇವನ ಕರ್ಮವೇ ಮೋಕ್ಷದ ಗುರಿ. ಇವನ ಸಾಧನೆ. ಇವನ ನಾಮವೇ ಮೋಕ್ಷದ ಮಂತ್ರವು. ಒಟ್ಟಿನಲ್ಲಿ ಇವನೇ ಮೋಕ್ಷದಾತನು.

'ನದೀನಾಂ ಸಾಗರೋಗತಿಃ' ಅಂದರು. ಎಲ್ಲರೂ ಇವನನ್ನೇ ಅಂತ್ಯದಲ್ಲಿ ಸೇರುವರು.

ಶನಿಯ ಧ್ಯಾನ್ಯವು ತಿಲ. ಇದರಿಂದ ಮಾಡುವುದು ತೈಲ. ಎಣ್ಣೆಗೂ ಇವನೇ ಕರಕ. ನಾನಾ ರೀತಿಯಾದ ಎಣ್ಣೆಗಳಿಗೂ ಇವನೇ ಕಾರಕನು. ಇವನ ಸ್ನಾನ, ತೈಲ ಸ್ನಾನ. ಇದರಿಂದ ಆಯುಷ್ಯ ಅಭಿವೃದ್ದಿ. ಶನಿ ಕೆಟ್ಟಾಗ ಎಳ್ಳು ರಾಶಿಗಳನ್ನು ಬ್ರಾಹ್ಮಣರಿಗೆ ದಕ್ಷಿಣೆ ಸಮೇತ ದಾನ ಮಾಡಿದರೆ ಗಂಡ ಪರಿಹಾರ ಅಂದರು. ಶ್ರೀ ಕೃಷ್ಣನ ಜನನವಾದಾಗ ನಂದನು ಈ ದಾನವನ್ನು ಮಾಡಿದನಂತೆ.

ಮೃತ್ತಿಗೆ ಇವನು ಕಾರಕನು. ಮೃತ ಧನ ಸಂಸ್ಥೆಗೂ ಇವನೇ ಕಾರಕನು. ಇದಕ್ಕೆ 'ವಿಮೆ' ಅಂದರು. ಈ ವಿಮಾ ಶಾಖೆಗೂ ಇವನೇ ಕಾರಕನು. ವಿಮಾ ಏಜೆಂಟರುಗಳಿಗೂ ಇವನೇ ಕಾರಕನು. ಸಾವಿಗೆ ಕಾರಕನು. ಸಾವು ಯಾವ ರೀತಿ ಬರುತ್ತದೆ ? ಇದನ್ನು ತೋರಿಸುವುದು ಇವನೇ. ಸಾಯುವ ಕಾಲದಲ್ಲಿ ಹರಿನಾಮ ಸ್ಮರಣೆ ಇದ್ದರೆ ಪುಣ್ಯ ಲೋಕವೆಂದರು. ಇದು ಉಂಟೇ ಇಲ್ಲವೇ ಎಂದು ತೋರಿಸುವವನು ಇವನೇ. ಆಗ ಅದು ಬರಲಾರದು. ಈ ಭಯಕ್ಕಾಗಿಯೇ ಬದುಕಿದ್ದಾಗಲೇ ಹರಿನಾಮ ಭಜನೆ ನಾಲಿಗೆಗೆ ಅಭ್ಯಾಸ ಮಾಡಿಸುತ್ತಾರೆ.

"ನಾಮ ಸಂಕೀರ್ತನಂ ಯಸ್ಯ ಸರ್ವ ಪಾಪ ಪ್ರಣಾಶನಂ ।
ಪ್ರಣಾಮೋ ದುಃಖ ಶಮನಂ ತಂ ನಮಾಮಿ ಹರಿಂ ಪರಂ ॥"

ಅಂದರು.

# 24

## ರಾಹು – ಕೇತುಗಳ ವಿಭಿನ್ನ ಗುಣಗಳು

ಸೂರ್ಯ ಗ್ರಹಣ ಚಂದ್ರ ಗ್ರಹಣ ಇವು ಎಲ್ಲರಿಗೂ ಗೊತ್ತಿರುವ ಸುದ್ದಿಯೇ ಹೌದು. ಭಾರತದಲ್ಲಿ ಅರ್ಜುನನು ಸೂರ್ಯ ಅಸ್ತಮಯವಾಗುವುದರಲ್ಲಿ ಜಯದ್ರಥನ ತಲೆ ತೆಗೆಯುವೆನೆಂದು ಪಣತೊಟ್ಟ. ಆಗ ಶ್ರೀ ಕೃಷ್ಣನು ತನ್ನ ಚಕ್ರದಿಂದ ಸೂರ್ಯನನ್ನು ಮರೆಮಾಡಿದ. ಸಂಜೆ ಆಯಿತು. ಪಂಥ ನೆರವೇರಲಿಲ್ಲ. ಅರ್ಜುನನು ಅಗ್ನಿ ಪ್ರವೇಶ ಮಾಡಬೇಕು. ಅದನ್ನು ನೋಡಿ ಆನಂದ ಪಡಲು ಸೈಂಧವನಾದ ಜಯದ್ರಥನು ಹೊರಗೆ ಬಂದನಂತೆ ಅರ್ಜುನನಿಗೆ ತಕ್ಷಣ ಅಸ್ತ್ರ ಹೂಡಿ ಅವನ ತಲೆ ತೆಗೆಯುವಂತೆ ಶ್ರೀ ಕೃಷ್ಣನು ಹೇಳಿದ. ಆಗ ಅರ್ಜುನನಿಗೆ ವಿಸ್ಮಯವಾಯಿತು. ತನ್ನ ಶಪಥವನ್ನು ನೆರವೇರಿಸಿಕೊಂಡನಂತೆ!

ಇದು ಭಾರತದ ಕಥೆ. ಈಗ ವಿಜ್ಞಾನದಲ್ಲಿ ಏನು ಹೇಳುವರು! ಆ ಕಾಲದಲ್ಲಿ ಸೂರ್ಯನಿಗೆ ಗ್ರಹಣ ಸಂಭವಿಸಿತು. ಆಗ ಸೂರ್ಯನು ಕಣ್ಮರೆಯಾಗಿದ್ದ. ರಾಹು ರವಿ ಸಂಧಿ ಸಮಯ. ಛಾಯೆ ಒಳಗೆ ಸೂರ್ಯನು ಅಡಗಿದ್ದ ಎನ್ನುತ್ತಾರೆ.

ಇದಕ್ಕೆ 'ಗ್ರಹಣ' ಅಂದರು. ರಾಹುವು 'ಗ್ರಹಣ' ಕಾರಕ 'ಗ್ರಹಣ' ಅಂದರೆ ಹಿಡಿಯುವುದು ಎಂದರ್ಥ.

## ಮೋಕ್ಷ ಕಾರಕ

ಇದಕ್ಕೆ ವಿರುದ್ಧ ಕೇತುವು 'ಮೋಕ್ಷ' ಕಾರಕನು. 'ಮೋಕ್ಷ' ಅಂದರೆ ಬಿಡುವುದು ಎಂದರ್ಥ. ಜೀನವಿಗೆ ಮೋಕ್ಷ ಅಗತ್ಯ. ಇದಕ್ಕೆ ಕೇತುವು ಕಾರಕನಾದನು.

ಈ ಮೋಕ್ಷ ಸಾಧನೆಗಳು ಮಂತ್ರ ಸಿದ್ಧಿ ತಪೋಸಿದ್ಧಿ, ತೀರ್ಥ ಸ್ನಾನ, ಭಗವತ್ ಸಾದಸೇವೆ ಮುಂತಾದವು. ಇವುಗಳಿಗೆಲ್ಲಾ ಕೇತುವೇ ಕಾರಕನು.

ಆಕಾಶದಲ್ಲಿ ಗ್ರಹಗಳು ಪ್ರದಕ್ಷಿಣವಾಗಿ ಸುತ್ತುತ್ತವೆ. ಆದರೆ ಇದು ವಿರುದ್ಧ ರೀತಿಯಲ್ಲಿ ಸಂಚಾರ ಮಾಡುತ್ತದೆ. ಇದೇ ಅಪ್ರದಕ್ಷಿಣ ಗತಿ. ರಾಹುವು 'ನೆರಳು ಗ್ರಹ' ಛಾಯಾ ಗ್ರಹ. ಇದು ಕತ್ತಲು. ಆದ್ದರಿಂದ 'ತಮೋ ಗ್ರಹ' ಛಾಯಾಗ್ರಹ. ಇದು ಕತ್ತಲು. ಆದ್ದರಿಂದ 'ತಮೋಗ್ರಹ' ಅಂದರು.

ಎಲ್ಲರೂ ಎಡದಿಂದ ಬರೆದರೆ ಬಲದಿಂದ ಎಡಕ್ಕೆ ಬರೆಯುವ ಜಾತಿ. ಅಂದರೆ ಉರ್ದು ಭಾಷೆ. ಈ ಭಾಷೆಗೆ ರಾಹುವೇ ಕಾರಕನು. ಆ ರೀತಿ ಸಂಬಂಧದ ಜನಗಳನ್ನೆಲ್ಲಾ ಇವನೇ ತೋರಿಸುವನು. ಇವರಿಗೆ ಮ್ಲೇಚ್ಛರು ಎಂದರು. ರಾಹುವು 'ಮ್ಲೇಚ್ಛ' ಕಾರಕನಾದನು.

ಇವನನ್ನು 'ಪಿತಾಮಹ' ಅಂದರು. 'ಬ್ರಹ್ಮ' ಎಂದರ್ಥ. ತಂದೆಯ ತಂದೆ, ತಾತನಿಗೂ ಸಲ್ಲುತ್ತೆ, ಈ ಹೆಸರು.

ಸರ್ವ ತೀರ್ಥಗಳಿಗೂ ಮೋಕ್ಷದಾಯಕ ಗ್ರಂಥಕಳಿಗೂ ಇವನೇ ಕಾರಕನು. ವಿಷ್ಣು ನಕ್ಷತ್ರ "ಶ್ರವಣ" ಅಲ್ಲಿ ಇವನು ಕೈವಲ್ಯ ದಾಯಕನು.

## ಭೂತ ಅಧಿಪತಿ

ರಾಹು ಕತ್ತಲು ಗ್ರಹ. ಕತ್ತಲು ಅಂದರೆ ಮಾಯೆ. ಇಂದ್ರಜಾಲ, ಮಹೇಂದ್ರಜಾಲ, ಮುಂತಾದ ತಂತ್ರ ವಿದ್ಯೆಗಳಿಗೂ ಇವನೇ ಕಾರಕನು. ಆದರ

ದೆಸೆಯಿಂದ ಮಾಡುವ ಶೂನ್ಯ ಮಾಟ ಇತ್ಯಾದಿ ಭೂತವಿದ್ಯೆಗೂ ಇವನೇ ಕಾರಕನು. 'ಕ್ಷುದ್ರ ತಂತ್ರ'ಕ್ಕೂ ಕಾರಕ.

ಇವನನ್ನು ರಾಕ್ಷಸ ಅಂದರು. ಅಮೃತವನ್ನು ಮೋಹಿನೀ ರೂಪಿಯಾದ ವಿಷ್ಣುವು ಹಂಚಿದನು. ಆಗ ಕದ್ದು ಅಮೃತವನ್ನು ಕುಡಿಯಲು ಹೋಗಿ ಎರಡು ಭಾಗ ಮಾಡಲ್ಪಟ್ಟ ಹಾವು ಈ ರಾಹು. ಅದೇ ಸ್ವರೂಪ ಇವನದು. ದೇಹ ಒಬ್ಬ, ಹೀಗೆ ರಾಹು ಕೇತುಗಳಾದರು.

ಹಾವು ಸ್ವರೂಪಿಯಾದ್ದರಿಂದ ಸಮಸ್ತ ಹಾವುಗಳಿಗೂ ಇವನೇ ಕಾರಕನು. ಹಾವು ಕಡಿದರೆ ವಿಷ ಏರಿ ಸಾಯುತ್ತಾರೆ. ಆದ್ದರಿಂದ ಇವನನ್ನು ಮೃತ್ಯುವು ಅಂದರು. ವಿಷಕ್ಕೂ ವಿಷಜಂತುಗಳಿಗೂ ಕಾರಕನು ಹಾವಿನಂತೆ ಕತ್ತಿಗೆ ಜೀರುಕುಣಿಗೆ (Noose) ಹಾಕಿ ಸಾಯಿಸುವುದಕ್ಕೂ ಸಾಯುವುದಕ್ಕೂ ಇವನೇ ಕಾರಣ. ಹಾವಿನಂತೆ ಇರುವ ಹಗ್ಗಕ್ಕೂ ಇವನೇ ಕಾರಕನು. ಇದನ್ನು ಸೂತ್ರ ಅಂದರು. ಈ ಕಾರಣ ಇವನು 'ಸೂತ್ರ ಕಾರಕ'ನಾದನು.

## ಸುದರ್ಶನ ಚಕ್ರ

ಹಾವುಗಳಿಗೆ ಅಭಿಮಾನಿ ದೇವತೆ 'ಸ್ಕಂದ'. ಸ್ಕಂದ ಅಂದರೆ ಕತ್ತು. ಇದಕ್ಕೆ 'ಗಡಿ' 'ಎಲ್ಲೆ' ಅಂದರು. 'ಸರಹದ್ದು'(Border) ಅಂದರು.

ಕತ್ತಿಗೆತಾನೇ ನೇಣು? ಈ ರೀತಿಯ ಸಾವಿಗೆ ಇವನೇ ಕಾರಕನಾದನು.

ಸೂರ್ಯ ಗ್ರಹಣ ಕಾಲದಲ್ಲಿ ಸೂರ್ಯನನ್ನು ಮರೆಮಾಡಿ ಅರ್ಜುನನು ಜೀವಂತ ಮಾಡಿದ ಶ್ರೀಕೃಷ್ಣನ ಚಕ್ರವೇ ರಾಹುವು. ಇದಕ್ಕೆ ಸುದರ್ಶನ ಅಂದರು. 'ಚಕ್ರ' ಸುತ್ತುತ್ತದೆ. ಚಕ್ರಗಳಿಂದ ಕೂಡಿ ಸುತ್ತುವ ರಾಟೆಗಳೇ ಮೊದಲಾದ ಯಂತ್ರಗಳಿಗೂ ಇವನೇ ಕಾರಕನಾದನು. ಸುತ್ತುವುದು ಅಂದರೆ ಪದೇ ಪದೇ ಬರುವುದು.ಈ ರೀತಿ ನಿರ್ದಿಷ್ಟ ಕಾಲದಲ್ಲಿ ಪದೇ ಪದೇ ಬರುವುದು. ಈ ರೀತಿ ನಿರ್ದಿಷ್ಟ ಕಾಲದಲ್ಲಿ ಪದೇ ಪದೇ ಬರುವುದಕ್ಕೆ 'ವಾರಂ ವಾರಂ' ಅಂದರು. ಏಳು ದಿನಗಳಿಗೊಮ್ಮೆ ಪುನಃ ಪುನಃ ಬರುವ ರವಿ, ಸೋಮ ಇತ್ಯಾದಿ

ವಾರಗಳಿಗೂ ಇವನೇ ಕಾರಕನು. ಇವನು 'ವಾರ ಕಾರಕ'ನಾದನು.

ವಿಷ್ಣು ರುದ್ರ ಎರಡು ದೇವತೆಗಳೂ ಒಟ್ಟಿಗೆ ಸೇರಿದ ಅವತಾರವೇ ರಾಹು. ಅದೇ ಶ್ರೀ ನರಸಿಂಹಾವತಾರ. ಕತ್ತಿನವರೆಗೆ ವಿಷ್ಣು. ದೇಹ ರುದ್ರನದು. ಈ ಸೃಷ್ಟಿ ವೈಚಿತ್ರಗಳಿಗೆಲ್ಲಾ ಇವನೇ ಕಾರಕನು.

ರಾಹುವು ಮ್ಲೇಚ್ಛನು. ಮ್ಲೇಚ್ಛ ದೇಶಗಳಿಗೂ, ಮ್ಲೇಚ್ಛ ಭಾಷೆಗಳಿಗೂ, ಮ್ಲೇಚ್ಛ ವಿದ್ಯೆಗಳಿಗೂ, ವಿಶೇಷ ವಿಜ್ಞಾನಕ್ಕೂ ಇವನೇ ಕಾರಕನು.

ಇವನು ಸೂರ್ಯನನ್ನು ನುಂಗುವುದರಿಂದ ಅವನಿಗಿಂತಲೂ ಬಲಿ.

ರಾಹು 'ಕತ್ತಲು ಗ್ರಹ' ಮಾಯ, ಮೋಸ ಮಾಡುವುದು, ಕಳ್ಳತನ ಮಾಡುವುದು, ಸುಳ್ಳು ಹೇಳುವುದು ಇವೆಲ್ಲಕ್ಕೂ ಇವನೇ ಕಾರಕನು.

ಜ್ಯೋತಿಷ್ಯ ಶಾಸ್ತ್ರದಲ್ಲಿ ಇವನದೇ ಆದ ಗುಣಗಳನ್ನು ಹೇಳಿಲ್ಲ. ಇವನು ಯಾರ ಜೊತೆ ಇರುವನೋ ಅವನ ಗುಣವನ್ನು ವಿಚಿತ್ರ ರೀತಿಯಲ್ಲಿ ಅತಿರೇಕ ಮಾಡುತ್ತಾನೆ.

## ಜೀವನ್ಮುಕ್ತ

ಕೇತುವು ಮೋಕ್ಷ ಕಾರಕನು ಗುರುವಿನ ರಾಶಿಯ ಮುಂದಿನ ರಾಶಿಯಲ್ಲಿದ್ದರೆ ಜೀವನ್ಮುಕ್ತನು. ಸರ್ವದಾ ಅನುಗ್ರಹ ಕರ್ತನು. ಮಂತ್ರ ಸಿದ್ಧಿ ಉಳ್ಳವನು. ಬ್ರಹ್ಮಜ್ಞಾನಿಯು.

ಗುರುವಿನ ಸಂಬಂಧ ಕೇತುವಿಗೆ ಬ್ರಹ್ಮಜ್ಞಾನವನ್ನು ಕೊಟ್ಟೀತು. ಶನಿ ಸಂಬಂಧದಿಂದ ಅಕಸ್ಮಾತ್ ಮೃತ್ಯು. ಅವನತಿಯ ಗತಿ ಲಾಭ. ಬುಧ ಸಂಬಂಧದಿಂದ ಬುದ್ಧಿಗೆ ಆಗಾಗ ಲಹರಿ ಭಂಗ. ಆದರೆ ಗುರುಯೋಗವೂ ಬಂದರೆ ದೋಷದಾಯಕ. ಹರಿಕಥೆ, ಗ್ರಂಥ ಪಾರಾಯಣ ಪ್ರಿಯನು. ಮೊತ್ತದಲ್ಲಿ ಕೇತು ಬಿಡಿಸುವ ಗ್ರಹ. ಯಾವ ನಮೂನೆಯ ಬಿಡುಗಡೆ ಆದರೂ ಸರಿ, ಅದು ಇವನ ಪ್ರಸಾದ.

ಪೂಜ್ಯಾಯ ರಾಘವೇಂದ್ರಾಯ ಸತ್ಯಧರ್ಮರತಾಯಚ ।<br>
ಭಜತಾಂ ಕಲ್ಪವೃಕ್ಷಾಯ ನಮತಾಂ ಕಾಮಧೇನವೇ ॥